

ಕರ್ನಾಟಕ ಸರ್ಕಾರ

# ವಾರ್ಷಿಕ ವರದಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

1992-93

# ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು

**ಉದ್ದೇಶ :**

ಸಾರ್ವಜನಿಕ ಆರೋಗ್ಯ ಪ್ರಾಮುಖ್ಯತೆಯ ವಿವಿಧ ರಾಷ್ಟ್ರೀಯ ಮತ್ತು ರಾಜ್ಯದ ಆರೋಗ್ಯ ಕಾರ್ಯಕ್ರಮಗಳನ್ನು ಕಾರ್ಯರೂಪಕ್ಕೆ ತರುವ ಮೂಲಕ ಆರೋಗ್ಯ ಪಾಲನಾ ಸೇವೆಗಳನ್ನು ವಿವಿಧ ರೀತಿಯ ಆರೋಗ್ಯ ಸಂಸ್ಥೆಗಳ ಜಾಲಬಂಧದ ಮೂಲಕ ಒದಗಿಸುವುದು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಉದ್ದೇಶವಾಗಿರುತ್ತದೆ.

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯು ಈ ಕೆಳಕಂಡ ಸೇವೆಗಳನ್ನು ಒದಗಿಸುತ್ತದೆ.

1 ಕನಿಷ್ಠಾವಶ್ಯಕತೆಗಳ ಯೋಜನೆಯ ಅಂಶವಾದ ಗ್ರಾಮೀಣ ಆರೋಗ್ಯ ಯೋಜನೆ,

2 ವೈದ್ಯಕೀಯ ಅಭಿವೃದ್ಧಿ ಕಾರ್ಯಕ್ರಮ

3 ತಾಯಿ ಮಕ್ಕಳ ಆರೋಗ್ಯ, ಕುಟುಂಬ ಕಲ್ಯಾಣ ಕಾರ್ಯಕ್ರಮ ಮತ್ತು ಲಸಿಕೆ ಕಾರ್ಯಕ್ರಮ.

4 ರಾಷ್ಟ್ರೀಯ ಕುಷ್ಠರೋಗ ನಿರ್ಮೂಲನಾ ಕಾರ್ಯಕ್ರಮ.

5 ರಾಷ್ಟ್ರೀಯ ಕ್ಷಯ ರೋಗ ನಿಯಂತ್ರಣ ಕಾರ್ಯಕ್ರಮ.

6 ರಾಷ್ಟ್ರೀಯ ಅಂಧತ್ವ ನಿಯಂತ್ರಣ ಕಾರ್ಯಕ್ರಮ.

7 ರಾಷ್ಟ್ರೀಯ ಮಲೇರಿಯಾ ನಿರ್ಮೂಲನಾ ಕಾರ್ಯಕ್ರಮ ಮತ್ತು ರಾಷ್ಟ್ರೀಯ ಫೈಲೇರಿಯಾ ರೋಗ ನಿಯಂತ್ರಣ ಕಾರ್ಯಕ್ರಮ.

8 ಸೋಂಕು ರೋಗಗಳಾದ ಅತಿಸಾರ ರೋಗಗಳು, ಕ್ಯಾಸನೂರು ಅರಣ್ಯ ಖಾಯಿಲೆ, ಜಪಾನಿಸ್ ಎನ್‌ಸಫಲೈಟಿಸ್ ನಿಯಂತ್ರಣ ಮತ್ತು ತಡೆಗಟ್ಟುವಿಕೆ.

9 ಆರೋಗ್ಯ ಶಿಕ್ಷಣ ಮತ್ತು ತರಬೇತಿ ಕಾರ್ಯಕ್ರಮ.

10 ಪೌಷ್ಠಿಕ ಆಹಾರ ಕಾರ್ಯಕ್ರಮ–ಪೌಷ್ಠಿಕ ಆಹಾರದ ಬಗ್ಗೆ ಶಿಕ್ಷಣ ಮತ್ತು ಪ್ರಾತ್ಯಕ್ಷಿಕತೆ.

11 ರಾಷ್ಟ್ರೀಯ ಗಳಗಂಡ ನಿಯಂತ್ರಣ ಕಾರ್ಯಕ್ರಮ.

12 ಪ್ರಯೋಗಾಲಯ ಸೇವೆಗಳು ಮತ್ತು ಲಸಿಕೆ ತಯಾರಿಕಾ ಘಟಕಗಳು.

13 ಶಿಕ್ಷಣ ಮತ್ತು ಪರಿಸರ ನೈರ್ಮಲ್ಯ.

14 ರೋಗ ಪರಿಹಾರಕ ಸೇವೆಗಳು.

## ಸಂಸ್ಥೆಯ ಆಡಳಿತ ಕ್ರಮಬದ್ಧ ಶ್ರೇಣಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರು ಇಲಾಖೆಯ ಮುಖ್ಯಸ್ಥರಾಗಿರುತ್ತಾರೆ. ಮತ್ತು ರಾಜ್ಯದಲ್ಲಿ ವಿವಿಧ ರಾಷ್ಟ್ರೀಯ ಹಾಗೂ ಕುಟುಂಬ ಕಲ್ಯಾಣ ಸೇವೆಗಳನ್ನೊಳಗೊಂಡಂತೆ ರಾಜ್ಯದ ಆರೋಗ್ಯ ಕಾರ್ಯಕ್ರಮಗಳನ್ನು ಕಾರ್ಯರೂಪಕ್ಕೆ ತರುವಲ್ಲಿ ಜವಾಬ್ದಾರರಾಗಿರುತ್ತಾರೆ.

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರಿಗೆ ಈ ಕೆಳಕಂಡ ಅಧಿಕಾರಿಗಳು ನೆರವಾಗುತ್ತಾರೆ.

ಅಪರ ನಿರ್ದೇಶಕರು, (ಕುಟುಂಬ ಕಲ್ಯಾಣ ಮತ್ತು ತಾಯಿ ಮಕ್ಕಳ ಆರೋಗ್ಯ)
ಜಂಟಿ ನಿರ್ದೇಶಕರು, (ಆರೋಗ್ಯ ಮತ್ತು ಯೋಜನೆ)
ಜಂಟಿ ನಿರ್ದೇಶಕರು, (ವೈದ್ಯಕೀಯ)
ಜಂಟಿ ನಿರ್ದೇಶಕರು, (ನೇತ್ರ ಶಾಸ್ತ್ರ)
ಜಂಟಿ ನಿರ್ದೇಶಕರು, (ಕ್ಷಯ)
ಜಂಟಿ ನಿರ್ದೇಶಕರು, (ಕುಷ್ಠ ರೋಗ)
ಜಂಟಿ ನಿರ್ದೇಶಕರು, (ಮಲೇರಿಯಾ ಮತ್ತು ಫೈಲೇರಿಯಾ)
ಜಂಟಿ ನಿರ್ದೇಶಕರು, (ಆರೋಗ್ಯ, ಶಿಕ್ಷಣ ಮತ್ತು ತರಬೇತಿ)
ಜಂಟಿ ನಿರ್ದೇಶಕರು, (ಅತಿಸಾರ ಮತ್ತು ಸಾಂಕ್ರಾಮಿಕ ರೋಗಗಳ ನಿಯಂತ್ರಣ)
ಜಂಟಿ ನಿರ್ದೇಶಕರು, (ಸರ್ಕಾರಿ ಔಷಧಿ ಮಳಿಗೆ )
ಜಂಟಿ ನಿರ್ದೇಶಕರು. (ಸಾರ್ವಜನಿಕ ಆರೋಗ್ಯ ಸಂಸ್ಥೆಯ)
ಜಂಟಿ ನಿರ್ದೇಶಕರು, (ಮಾಹಿತಿ, ಶಿಕ್ಷಣ ಮತ್ತು ಸಂಪರ್ಕ)
ಜಂಟಿ ನಿರ್ದೇಶಕರು, (ಕುಟುಂಬ ಕಲ್ಯಾಣ)
ಜಂಟಿ ನಿರ್ದೇಶಕರು, (ಲಸಿಕೆ ಸಂಸ್ಥೆ)
ಡೆಮೋಗ್ರಾಫರ್
ಉಪ ನಿರ್ದೇಶಕರು, (ಆರೋಗ್ಯ ಮತ್ತು ಯೋಜನೆ)
ಉಪ ನಿರ್ದೇಶಕರು (ಮಲೇರಿಯಾ ಮತ್ತು ಫೈಲೇರಿಯಾ)
ಉಪ ನಿರ್ದೇಶಕರು, (ಕ್ಷಯ ರೋಗ)
ಉಪ ನಿರ್ದೇಶಕರು, (ಸೂಕ್ಷ್ಮಾಣು ಜೀವಿಗಳು)
ಉಪ ನಿರ್ದೇಶಕರು, (ಎಪಿಡಮಿಯಾಲಜಿ)
ಉಪ ನಿರ್ದೇಶಕರು, (ವೈದ್ಯಕೀಯ)
ಉಪ ನಿರ್ದೇಶಕರು, (ಫಾರ್ಮಸಿ)
ಉಪ ನಿರ್ದೇಶಕರು, (ಪೌಷ್ಠಿಕ ಆಹಾರ)
ಉಪ ನಿರ್ದೇಶಕರು, (ಸೂಕ್ಷ್ಮಾಣು, ಜೀವಿಗಳು ಸಾರ್ವಜನಿಕ ಆರೋಗ್ಯ ಸಂಸ್ಥೆ)
ಉಪ ನಿರ್ದೇಶಕರು, (ಶಾಲಾ ಆರೋಗ್ಯ ಶಿಕ್ಷಣ)
ಉಪ ನಿರ್ದೇಶಕರು, (ಕುಟುಂಬ ಕಲ್ಯಾಣ)

ಉಪ ನಿರ್ದೇಶಕರು, (ತಾ. ಮು. ಆರೋಗ್ಯ ರಕ್ಷಕ ಚಿಕಿತ್ಸೆ)

ಉಪ ನಿರ್ದೇಶಕರು, (ಐಯುಡಿ)

ಉಪ ನಿರ್ದೇಶಕರು, (ಸಾರಿಗೆ)

ಉಪ ನಿರ್ದೇಶಕರು, (ಪ್ರಕಟಣೆಗಳು)

ಈ ಅಧಿಕಾರಿಗಳು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರಿಗೆ ತಾಂತ್ರಿಕ ಸಲಹೆಗಾರರಾಗಿ ಕಾರ್ಯನಿರ್ವಹಿಸುತ್ತಾರೆ. ಒಬ್ಬ ಮುಖ್ಯ ಲೆಕ್ಕಪತ್ರಾಧಿಕಾರಿ ಹಾಗೂ ಆರ್ಥಿಕ ಸಲಹೆಗಾರರು ಮತ್ತು ಒಬ್ಬರು ಮುಖ್ಯ ಆಡಳಿತಾಧಿಕಾರಿಗಳು, ಆಡಳಿತಾಧಿಕಾರಿಗಳು (ಸಾಮಾನ್ಯ, ಕುಟುಂಬ ಕಲ್ಯಾಣ ಮತ್ತು ಸಾರಿಗೆ) ಇವರುಗಳು ಕ್ರಮವಾಗಿ ಇಲಾಖೆಗೆ ಸಂಬಂಧಿಸಿದ ಹಣಕಾಸು ಮತ್ತು ಲೆಕ್ಕಪತ್ರ, ಆಡಳಿತಕ್ಕೆ ಸಂಬಂಧಪಟ್ಟಂತೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರಿಗೆ ನೆರವಾಗುತ್ತಾರೆ.

ವಿಭಾಗ ಮಟ್ಟದಲ್ಲಿ ನಾಲ್ಕು ಮಂದಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ವಿಭಾಗೀಯ ಸಹ ನಿರ್ದೇಶಕರುಗಳಿದ್ದು, ಇವರು ಬೆಂಗಳೂರು, ಬೆಳಗಾವಿ, ಗುಲ್ಬರ್ಗಾ ಮತ್ತು ಮೈಸೂರಿನಲ್ಲಿ ವಿಭಾಗೀಯ ಮಟ್ಟದಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಇವರುಗಳಿಗೆ ಸಹಾಯಕರುಗಳಾಗಿ ತಲಾ ಇಬ್ಬರಂತೆ ಉಪ ನಿರ್ದೇಶಕರು (ರಾಷ್ಟ್ರೀಯ ಮಲೇರಿಯಾ ನಿರ್ಮೂಲನಾ ಕಾರ್ಯಕ್ರಮ ಮತ್ತು ಸಾಮಾನ್ಯ) ಇರುತ್ತಾರೆ.

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ವಿಭಾಗೀಯ ಸಹ ನಿರ್ದೇಶಕರುಗಳು ಅವರವರ ಅಧಿಕಾರ ವ್ಯಾಪ್ತಿಯೊಳಗೆ ಬರುವ ಜಿಲ್ಲೆಗಳಲ್ಲಿ ಪರ್ಯವೇಕ್ಷಣೆ ನಡೆಸುವುದು ಮತ್ತು ಕುಟುಂಬ ಕಲ್ಯಾಣ ಸೇವೆಗಳು ಹಾಗೂ ಪ್ರಸೂತಿ ಮತ್ತು ಮಕ್ಕಳ ಆರೋಗ್ಯ ಸೇವೆಗಳನ್ನೊಳಗೊಂಡಂತೆ ವಿವಿಧ ರಾಷ್ಟ್ರೀಯ ಮತ್ತು ರಾಜ್ಯದ ಆರೋಗ್ಯ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಕಾರ್ಯಾಚರಣೆಗೆ ತರುವುದಕ್ಕೆ ಜವಾಬ್ದಾರರಾಗಿರುತ್ತಾರೆ.

ಜಿಲ್ಲಾ ಮಟ್ಟದಲ್ಲಿ 20 ಮಂದಿ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು ಇರುತ್ತಾರೆ. ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳ ನೆರವಿಗೆ ಜಿಲ್ಲಾ ಕುಷ್ಠರೋಗಾಧಿಕಾರಿಗಳು, ಜಿಲ್ಲಾ ಮಲೇರಿಯಾಧಿಕಾರಿಗಳು, ಜಿಲ್ಲಾ ಕ್ಷಯರೋಗಾಧಿಕಾರಿಗಳು, ಜಿಲ್ಲಾ ಪ್ರಯೋಗ ಶಾಲೆಗಳಲ್ಲಿನ ಅಧಿಕಾರಿಗಳು, ವೈದ್ಯಾಧಿಕಾರಿಗಳು (ಕುಟುಂಬ ಕಲ್ಯಾಣ ಮತ್ತು ಪ್ರಸೂತಿ ಮತ್ತು ಮಕ್ಕಳ ಆರೋಗ್ಯ ಸೇವೆಗಳು), ಜಿಲ್ಲಾ ಲಸಿಕಾಧಿಕಾರಿಗಳು ಮತ್ತು ಪ್ರಾದೇಶಿಕ ಸಹಾಯಕ ರಾಸಾಯನಿಕ ವಿಶ್ಲೇಷಕರುಗಳು ಇರುತ್ತಾರೆ, ಮತ್ತು ಇವರುಗಳು ಕುಟುಂಬ ಕಲ್ಯಾಣ ಸೇವೆಗಳು ಹಾಗೂ ಪ್ರಸೂತಿ ಮತ್ತು ಮಕ್ಕಳ ಆರೋಗ್ಯ ಸೇವೆಗಳನ್ನೊಳಗೊಂಡಂತೆ ರಾಷ್ಟ್ರೀಯ ಮತ್ತು ರಾಜ್ಯದ ಆರೋಗ್ಯ ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸಲು ಜವಾಬ್ದಾರರಾಗಿರುತ್ತಾರೆ.

ಜಿಲ್ಲಾ ಮಟ್ಟದಲ್ಲಿರುವ ಜಿಲ್ಲಾ ಆಸ್ಪತ್ರೆಗಳ ಜಿಲ್ಲಾ ಶಸ್ತ್ರಚಿಕಿತ್ಸಕರುಗಳು ರೋಗ ಪರಿಹಾರಕ ಸೇವೆಗಳನ್ನು ಒದಗಿಸುವುದಕ್ಕೆ ಜವಾಬ್ದಾರರಾಗಿರುತ್ತಾರೆ. ಜಿಲ್ಲಾ ಆಸ್ಪತ್ರೆಗಳು ಪರಾಮರ್ಶಕ ಆಸ್ಪತ್ರೆಗಳಾಗಿಯೂ ಕಾರ್ಯನಿರ್ವಹಿಸುತ್ತವೆ.

ಉಪ ವಿಭಾಗ ಮಟ್ಟದಲ್ಲಿ 49 ಸಹಾಯಕ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು ಇರುತ್ತಾರೆ ಮತ್ತು ಇವರುಗಳು ಕುಟುಂಬ ಕಲ್ಯಾಣ ಹಾಗೂ ಪ್ರಸೂತಿ ಮತ್ತು ಮಕ್ಕಳ ಆರೋಗ್ಯ ಸೇವೆಗಳನ್ನು ಒಳಗೊಂಡಂತೆ ವಿವಿಧ ರಾಷ್ಟ್ರೀಯ ಮತ್ತು ರಾಜ್ಯದ ಆರೋಗ್ಯ ಕಾರ್ಯಕ್ರಮಗಳನ್ನು ಉಪ ವಿಭಾಗಮಟ್ಟದಲ್ಲಿ ಕಾರ್ಯಗತಗೊಳಿಸಲು ಜವಾಬ್ದಾರರಾಗಿರುತ್ತಾರೆ.

ಪ್ರಾಥಮಿಕ ಆರೋಗ್ಯ ಕೇಂದ್ರಗಳ ಮಟ್ಟದಲ್ಲಿ ವೈದ್ಯಾಧಿಕಾರಿಗಳು ಕುಟುಂಬ ಕಲ್ಯಾಣ ಹಾಗೂ ಪ್ರಸೂತಿ ಮತ್ತು ಮಕ್ಕಳ ಆರೋಗ್ಯ ಸೇವೆಗಳನ್ನೊಳಗೊಂಡಂತೆ ರಾಷ್ಟ್ರೀಯ ಮತ್ತು ರಾಜ್ಯದ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಕಾರ್ಯಗತಗೊಳಿಸಲು ಜವಾಬ್ದಾರರಾಗಿರುತ್ತಾರೆ.

## 1992-93ನೇ ಸಾಲಿನ (ನವೆಂಬರ್ 1992ರ ಅಂತ್ಯದವರೆಗೆ) ಸಾಧನೆಗಳು ಈ ಕೆಳಕಂಡಂತೆ ಇವೆ.

1992-93ನೇ ಸಾಲಿಗೆ ಸರ್ಕಾರವು ಈ ಕೆಳಕಂಡ ಯೋಜನೆಗಳಿಗೆ ಮಂಜೂರಾತಿ ನೀಡಿದೆ.

1) ಹಾಲಿ 5? ಪ್ರಾಥಮಿಕ ಆರೋಗ್ಯ ಕೇಂದ್ರಗಳು ಮತ್ತು 1? ಸಮುದಾಯ ಆರೋಗ್ಯ ಕೇಂದ್ರಗಳನ್ನು ಸ್ಥಾಪಿಸಲು ಆದೇಶ ನೀಡಬೇಕಾಗಿದ್ದು, 40 ಪ್ರಾಥಮಿಕ ಆರೋಗ್ಯ ಕೇಂದ್ರಗಳು ಮತ್ತು 2 ಸಮುದಾಯ ಆರೋಗ್ಯ ಕೇಂದ್ರಗಳಿಗೆ ಮಂಜೂರಾತಿ ಪಡೆಯಲಾಗಿದೆ.

2) ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲ್ಲೂಕಿನ ದಾರದಹಳ್ಳಿ ಪ್ರಾಥಮಿಕ ಆರೋಗ್ಯ ಕೇಂದ್ರ, ಕೊಪ್ಪ ತಾಲ್ಲೂಕಿನ ಉತ್ತಮೇಶ್ವರ ಪ್ರಾಥಮಿಕ ಆರೋಗ್ಯ ಘಟಕ, ಬೀದರ್ ಜಿಲ್ಲೆಯ ಔರದ್ ತಾಲ್ಲೂಕಿನ ತೋರಣಾ ಪ್ರಾಥಮಿಕ ಆರೋಗ್ಯ ಘಟಕ, ಹಾಸನ ಜಿಲ್ಲೆಯ ಅರಕಲಗೂಡು ತಾಲ್ಲೂಕಿನ ಬಸವಾಪಟ್ಟಣ ಮತ್ತು ಕೋಲಾರ ಜಿಲ್ಲೆಯ ಚಿಂತಾಮಣಿ ತಾಲ್ಲೂಕಿನ ಕೈವಾರ ಪ್ರಾಥಮಿಕ ಆರೋಗ್ಯ ಕೇಂದ್ರ, ಈ ಸ್ಥಳಗಳಲ್ಲಿ ಪ್ರಸೂತಿ ಗೃಹ ಸ್ಥಾಪನೆಗೆ ಮಂಜೂರಾತಿ,

3) ಹಾಸನ, ಕಾರವಾರ, ಬೀದರ್, ಶಿವಮೊಗ್ಗ ಗುಲ್ಬರ್ಗಾ ಮತ್ತು ವಿಜಾಪುರದಲ್ಲಿರುವ ಕೇಂದ್ರಗಳಲ್ಲಿ ಕ್ಷ-ಕಿರಣ ತಜ್ಞರ ತರಬೇತಿ ಪ್ರಾರಂಭಿಸುವಿಕೆ.

4) ಕಾರವಾರ ಮತ್ತು ಚಿತ್ರದುರ್ಗ ಜಿಲ್ಲಾ ಆಸ್ಪತ್ರೆಗಳಲ್ಲಿ ತಲಾ ನಾಲ್ಕು ಹುದ್ದೆಗಳೊಡನೆ ತರಬೇತಿ ಮಾನಸಿಕ ಚಿಕಿತ್ಸಾಲಯಗಳ ಸ್ಥಾಪನೆ.

5) 1990-91ನೇ ಸಾಲಿನಲ್ಲಿ ಮಂಜೂರಾದ 30/50 ಹಾಸಿಗೆಗಳ ಸಮುದಾಯ ಆರೋಗ್ಯ ಕೇಂದ್ರಗಳಿಗೆ 177 ಹುದ್ದೆಗಳ ಸೃಜನೆ.

6) 1989-90 ಮತ್ತು 1990-91ನೇ ಸಾಲಿನಲ್ಲಿ ಮಂಜೂರಾದ 140 ಹೊಸ ಪ್ರಾಥಮಿಕ ಆರೋಗ್ಯ ಕೇಂದ್ರಗಳು ಮತ್ತು ಮೇಲ್ದರ್ಜೆಗೇರಿಸಿದ 222 ಪ್ರಾಥಮಿಕ ಆರೋಗ್ಯ ಕೇಂದ್ರಗಳಿಗೆ 1144 ಹುದ್ದೆಗಳ ಸೃಜನೆ.

7) ಉಲ್ಲಾಳ, ಇಳಕಲ್, ಚಿಂಚೋಳಿ ಮತ್ತು ದೇವದುರ್ಗಗಳಲ್ಲಿ 12 ಹುದ್ದೆಗಳೊಡನೆ ನಾಲ್ಕು ಆನೇಕಾಲು ರಾತ್ರಿ ಚಿಕಿತ್ಸಾಲಯಗಳ ಸ್ಥಾಪನೆ.

8) ಬಿಜಾಪುರ ಮತ್ತು ಬೀದರ್ ಜಿಲ್ಲಾ ಆಸ್ಪತ್ರೆಗಳಿಗೆ ಮುಖ್ಯ ಫಾರ್ಮಸಿಸ್ಟ್ ಮತ್ತು ಬೀದರ್ ಜಿಲ್ಲಾ ಆಸ್ಪತ್ರೆಗೆ ಒಂದು ಪದವೀಧರ ಫಾರ್ಮಸಿಸ್ಟ್ ಹುದ್ದೆ ನವೀಕರಿಸುವಿಕೆ.

9) ಬೆಂಗಳೂರು ಸಾಂಕ್ರಾಮಿಕ ರೋಗಗಳ ಆಸ್ಪತ್ರೆ, ಕೋಲಾರದ ಕಮಲಾನೆಹರು ಕ್ಷಯ ಹಾಗೂ ಎದೆರೋಗಗಳ ಆಸ್ಪತ್ರೆ ಮತ್ತು ಚಿತ್ರದುರ್ಗ ಜಿಲ್ಲಾ ಆಸ್ಪತ್ರೆಗಳಿಗೆ 5.00 ಲಕ್ಷ ರೂಗಳಲ್ಲಿ ನೀರಿನ ಸೌಲಭ್ಯದ ಅಭಿವೃದ್ಧಿ.

10) ವಿಶ್ವಬ್ಯಾಂಕ್ ಸಹಾಯದಿಂದ ಬೆಂಗಳೂರು ನಗರ ಮಹಾನಗರ ಪಾಲಿಕೆಯ ವ್ಯಾಪ್ತಿಯಲ್ಲಿ ಬರುವ ಕೊಳಚೆ ಪ್ರದೇಶಗಳಲ್ಲಿ ಭಾರತೀಯ ಜನಸಂಖ್ಯಾ ಯೋಜನೆ ಜಾರಿಗೊಳಿಸುವಿಕೆ.

11) ಶಿವಮೊಗ್ಗ ಜಿಲ್ಲೆಯ ಸೊರಬ 5? ಹಾಸಿಗೆಗಳ ಸಾರ್ವಜನಿಕ ಆಸ್ಪತ್ರೆಯ ಕಟ್ಟಡ ಮತ್ತು ಆಯನೂರು ಪ್ರಾಥಮಿಕ ಆರೋಗ್ಯ ಕೇಂದ್ರ ಮತ್ತು ಸಾತನೂರು ಪ್ರಾಥಮಿಕ ಆರೋಗ್ಯ ಕೇಂದ್ರ ಬೆಂಗಳೂರು(ಗ್ರಾ)ಜಿಲ್ಲೆಗಳನ್ನು 30 ಹಾಸಿಗೆಗಳ ಸಮುದಾಯ ಆರೋಗ್ಯ ಕೇಂದ್ರವನ್ನಾಗಿ ಪರಿವರ್ತಿಸಲು ಆಡಳಿತಾತ್ಮಕ ಮಂಜೂರಾತಿ ನೀಡಲಾಗಿದೆ.

12) 15 ಪ್ರಸೂತಿ ಗೃಹಗಳ ಹಾಸಿಗೆಗಳ ಸಂಖ್ಯೆಯನ್ನು 6 ರಿಂದ 10ಕ್ಕೆ ಪರಿವರ್ತಿಸಿ, ಈ 15 ಪ್ರಸೂತಿ ಗೃಹಗಳಿಗೆ ಮತ್ತು ಇನ್ನೂ 26 ಪ್ರಸೂತಿ ಗೃಹಗಳಿಗೆ ಅಂದರೆ ಒಟ್ಟಾರೆ 41 ಪ್ರಸೂತಿ ಗೃಹಗಳಿಗೆ 97 ಹೆಚ್ಚುವರಿ ಸಿಬ್ಬಂದಿ ಮಂಜೂರಾತಿ.

13) ರಾಮನಗರ ಮತ್ತು ಚನ್ನಪಟ್ಟಣ ಸಾರ್ವಜನಿಕ ಆಸ್ಪತ್ರೆಗಳಿಗೆ 7 ಹುದ್ದೆಗಳನ್ನು ಮಂಜೂರು ಮಾಡಲಾಗಿದೆ.

14) ಹಿರಿಯೂರು ಆಸ್ಪತ್ರೆಯ ಹಾಸಿಗೆ ಸಂಖ್ಯೆಯನ್ನು 40 ರಿಂದ 50ಕ್ಕೆ ಹೆಚ್ಚಿಸಿ 6 ಹುದ್ದೆಗಳನ್ನು ಮಂಜೂರು ಮಾಡಲಾಗಿದೆ. ಮತ್ತು ಹೊಳೆನರಸೀಪುರ ಆಸ್ಪತ್ರೆಯ ಹಾಸಿಗೆ ಸಂಖ್ಯೆಯನ್ನು 50 ರಿಂದ 100ಕ್ಕೆ ಹೆಚ್ಚಿಸಿ 8 ಹುದ್ದೆಗಳನ್ನು ಮಂಜೂರು ಮಾಡಲಾಗಿದೆ.

15) ಈ ಕೆಳಕಂಡ ಆಸ್ಪತ್ರೆಗಳಿಗೆ ಹೆಚ್ಚುವರಿ ಸಿಬ್ಬಂದಿ ಮಂಜೂರಾತಿ,

| | | |
|---|---|---|
| ಕಾರವಾರ 100 ಹಾಸಿಗೆಗಳ ಸ್ಥಾಪನೆ | ... | 27 ಹುದ್ದೆಗಳು |
| ತುಮಕೂರು–ಶಸ್ತ್ರಚಿಕಿತ್ಸಾಲಯ | ... | 5 ಹುದ್ದೆಗಳು |
| ಕೆ.ಎಫ್.ಡಿ. ಲಸಿಕೆ ಉತ್ಪಾದನೆ ಘಟಕ, ಶಿವಮೊಗ್ಗ | ... | 4 ಹುದ್ದೆಗಳು |
| ಜಯನಗರ ಸಾರ್ವಜನಿಕ ಆಸ್ಪತ್ರೆ, ಬೆಂಗಳೂರು | ... | 49 ಹುದ್ದೆಗಳು |

ಇದರ ಹಾಸಿಗೆಗಳ ಸಂಖ್ಯೆಯನ್ನು 200 ರಿಂದ 300ಕ್ಕೆ ಹೆಚ್ಚಿಸಿರುವಿಕೆ

16) ಎ) ಶುಶ್ರೂಷಾ ಕಾರ್ಯಕ್ರಮವನ್ನು 1992–93ನೇ ಸಾಲಿನಲ್ಲಿ ಮುಂದುವರೆಸುವುದು,
ಬಿ) ನೇತ್ರ ಯೋಜನ ಕಾರ್ಯಕ್ರಮವನ್ನು 1992–93ನೇ ಸಾಲಿನಲ್ಲಿ ಮುಂದುವರೆಸುವುದು.

17) ನಿರ್ದೇಶನಾಲಯದಲ್ಲಿ ಏಡ್ಸ್ ಘಟಕ ಸ್ಥಾಪನೆ (12 ಹುದ್ದೆಗಳು)

18) ಶಿವಮೊಗ್ಗ ಜಿಲ್ಲೆಯ ಹೊನ್ನಾಳಿಯಲ್ಲಿ ರಾಷ್ಟ್ರೀಯ ಕುಷ್ಠರೋಗ ನಿಯಂತ್ರಣಾ ಕೇಂದ್ರ ಸ್ಥಾಪನೆ,

19) ಕೊಪ್ಪಳ, ಸಿರಾ, ಮತ್ತು ಹೊಸಪೇಟೆಯಲ್ಲಿ ಮೂರು ಹೆಚ್ಚುವರಿ ಜಿಲ್ಲಾ ಕ್ಷಯರೋಗ ಕೇಂದ್ರಗಳ ಸ್ಥಾಪನೆ.

20) ತಾಲ್ಲೂಕುಮಟ್ಟದಲ್ಲಿರುವ ನೂರು ಹಾಸಿಗೆ ಮತ್ತು ಅದಕ್ಕಿಂತ ಹೆಚ್ಚು ಹಾಸಿಗೆಯುಳ್ಳ ಎಲ್ಲಾ ಆಸ್ಪತ್ರೆಗಳನ್ನು ದಿನಾಂಕ 1–1–93 ರಿಂದ ಜಿಲ್ಲಾ ಪರಿಷತ್ ಅಧೀನದಿಂದ ರಾಜ್ಯವಲಯಕ್ಕೆ ತೆಗೆದುಕೊಳ್ಳಲು ಮಂಜೂರಾತಿ ನೀಡಲಾಗಿದೆ.

ಜಿಲ್ಲಾ ಪರಿಷತ್‌ನಿಂದ ರಾಜ್ಯವಲಯಕ್ಕೆ ಹಸ್ತಾಂತರಿಸುವ ನಿರ್ಣಯಕೊಳಪಡುವ 7 ತಾಲ್ಲೂಕು ಮಟ್ಟದ ಸಾರ್ವಜನಿಕ ಆಸ್ಪತ್ರೆಗಳಾದ ಬಾಗಲಕೋಟೆ, ಸೋಮವಾರಪೇಟೆ, ವೀರರಾಜೇಂದ್ರ ಪೇಟೆ ಹೊಳೆನರಸೀಪುರ, ಹೊಸಪೇಟೆ, ಚನ್ನಪಟ್ಟಣ ಮತ್ತು ಉಡುಪಿ ಇವುಗಳನ್ನು ದಿನಾಂಕ 1–1–93 ರಿಂದ ಜಿಲ್ಲಾ ಪರಿಷತ್ ಅಧೀನದಿಂದ ರಾಜ್ಯವಲಯಕ್ಕೆ ವರ್ಗಾಯಿಸಲೂ ಸಹ ಆದೇಶ ನೀಡಲಾಗಿದೆ.

ವೈದ್ಯಕೀಯ ರಕ್ಷಣೆ (ನಗರ)

ಜಿಲ್ಲಾ ಆಸ್ಪತ್ರೆಗಳು ರೋಗಿಗಳ ಚಿಕಿತ್ಸಾ ಸೇವೆಯೇ ಅಲ್ಲದೆ ರೋಗ ನಿರೋಧಕ ಹಾಗೂ ಆರೋಗ್ಯ ಉತ್ತೇಜಕ ಕಾರ್ಯಕ್ರಮದಲ್ಲೂ ಪಾಲುಗೊಳ್ಳುತ್ತಿವೆ, ವೈದ್ಯಕೀಯ ಪರಿಹಾರವನ್ನು ಜಿಲ್ಲಾ ಹಾಗೂ ದೊಡ್ಡ ಆಸ್ಪತ್ರೆಗಳು ಮತ್ತು ಸಾಂಕ್ರಾಮಿಕ ರೋಗಗಳ ಆಸ್ಪತ್ರೆಗಳು ಮುಂತಾದ ವಿವಿಧ ಬಗೆಯ ಕೆಳಕಂಡ ಆಸ್ಪತ್ರೆಗಳ ಮೂಲಕ ಒದಗಿಸುತ್ತಿದೆ.

| | | ಸಂಸ್ಥೆಗಳ ಸಂಖ್ಯೆ | ಹಾಸಿಗೆಗಳ ಸಂಖ್ಯೆ (ನವೆಂಬರ್ 1992ರ ಅಂತ್ಯದವರೆವಿಗೆ) |
|---|---|---|---|
| 1 | ಜಿಲ್ಲಾ ಆಸ್ಪತ್ರೆಗಳು | 16 | 5788 |
| 2 | ಬೋಧಕ ಆಸ್ಪತ್ರೆಗಳು | 9 | 5907 |
| 3 | ದೊಡ್ಡ ಆಸ್ಪತ್ರೆಗಳು (2 ಬೋಧಕ ಆಸ್ಪತ್ರೆಗಳು ಸೇರಿ) | 8 | 1521 |
| 4 | ವಿಶೇಷ ಆಸ್ಪತ್ರೆಗಳು (6 ಬೋಧಕ ಆಸ್ಪತ್ರೆಗಳು ಸೇರಿ) | 16 | 3330 |
| 5 | ಸಾರ್ವಜನಿಕ ಆಸ್ಪತ್ರೆಗಳು ಹಾಗೂ ಇತರೆ ಆಸ್ಪತ್ರೆಗಳು | 127 | 6090 |
| | ಒಟ್ಟು | 176 | 22,636 |

*ಜಿಲ್ಲಾ ಆಸ್ಪತ್ರೆ, ಬೆಳಗಾವಿ, ಗುಲ್ಬರ್ಗಾ ಮತ್ತು ಮಂಗಳೂರು ಇವುಗಳು ವೈದ್ಯಕೀಯ ಶಿಕ್ಷಣ ಇಲಾಖೆಯ ಅಧೀನದಲ್ಲಿ ಬರುತ್ತವೆ.

ಪ್ರತಿ ಜಿಲ್ಲಾ ಆಸ್ಪತ್ರೆಯು ಕೆಳಕಂಡ ವಿಶೇಷ ಸೇವಾ ಸೌಲಭ್ಯಗಳನ್ನು ಹೊಂದಿರುತ್ತವೆ

1 ಕಾಯಚಿಕಿತ್ಸೆ,
2 ಶಸ್ತ್ರಚಿಕಿತ್ಸೆ,
3 ಪ್ರಸೂತಿ ಮತ್ತು ಸ್ತ್ರೀರೋಗ ಚಿಕಿತ್ಸೆ,
4 ಮಕ್ಕಳ ಚಿಕಿತ್ಸೆ,
5 ಅಸ್ಥಿ ಚಿಕಿತ್ಸೆ.
6 ನೇತ್ರ ಚಿಕಿತ್ಸೆ,
7 ಕಿವಿ, ಮೂಗು ಮತ್ತು ಗಂಟಲು ಚಿಕಿತ್ಸೆ (ಓಟೋರೈನೊಲೆರಿಂಗಾಲಜಿ)
8 ಚರ್ಮ ಮತ್ತು ಗುಹ್ಯ ರೋಗಗಳ ಚಿಕಿತ್ಸೆ (ಡರ್ಮಟಾಲಜಿ ಮತ್ತು ವೆನೇರಲ್‌ಡಿಸೀಸಸ್)
9 ರೋಗ ನಿಧಾನ ಶಾಸ್ತ್ರ ಮತ್ತು ಏಕಾಣುಜೀವಿ ಶಾಸ್ತ್ರ
10 ಕ್ಷ-ಕಿರಣ,
11 ಅರಿವಳಿಕೆ,
12 ದಂತ ಚಿಕಿತ್ಸೆ.

ಜಿಲ್ಲಾ ಆಸ್ಪತ್ರೆಗಳಲ್ಲಿ ಇರುವ ವಿಶೇಷ ತಜ್ಞರ ಸೇವಾ ವಿಭಾಗಗಳು ಆಸ್ಪತ್ರೆಗಳಿಗೆ ನೇರವಾಗಿ ಬರುವ ಹಾಗೂ ಗ್ರಾಮಾಂತರ ಪ್ರದೇಶದ ಚಿಕ್ಕ ಆರೋಗ್ಯ ಸಂಸ್ಥೆಗಳಿಂದ ಮತ್ತು ಹಳ್ಳಿಗಾಡಿನ ಆರೋಗ್ಯ ಸಂಸ್ಥೆಗಳಿಂದ ಬರುವಂತಹ ರೋಗಿಗಳಿಗೂ ಸೇವಾ ಸೌಲಭ್ಯಗಳನ್ನು ಒದಗಿಸುತ್ತದೆ. ಜಿಲ್ಲಾ ಆಸ್ಪತ್ರೆಗಳು ಕೆಳಹಂತದ ಆರೋಗ್ಯ ಸಂಸ್ಥೆಗಳಿಗೆ ಪರಾಮರ್ಶಕ ಆಸ್ಪತ್ರೆಗಳಾಗಿ ಕಾರ್ಯ ನಿರ್ವಹಿಸುತ್ತವೆ.

ಎಸ್. ಸಿ. ಆಸ್ಪತ್ರೆ, ಹಾಸನ ಮೆಗ್ಗಾನ್ ಆಸ್ಪತ್ರೆ, ಶಿವಮೊಗ್ಗ, ಎಸ್.ಎನ್.ಆರ್. ಆಸ್ಪತ್ರೆ, ಕೋಲಾರ ಮತ್ತು ಜಿಲ್ಲಾ ಆಸ್ಪತ್ರೆ, ಬಿಜಾಪುರ ಇವುಗಳಲ್ಲಿ ಸುಟ್ಟಗಾಯ ಮತ್ತು ಆಕಸ್ಮಿಕ ವಿಭಾಗ ಗಳನ್ನು ಸ್ಥಾಪಿಸಲಾಗಿದೆ.

ಎಲ್ಲಾ ಜಿಲ್ಲಾ ಆಸ್ಪತ್ರೆಗಳಲ್ಲಿ ಮತ್ತು ಉಡುಪಿ, ಕೆ.ಜಿ.ಎಫ್. ಮತ್ತು ಕೊಳ್ಳೇಗಾಲದಲ್ಲಿರುವ ಸಾರ್ವಜನಿಕ ಆಸ್ಪತ್ರೆಗಳಲ್ಲಿ ಗುಹ್ಯರೋಗ ಚಿಕಿತ್ಸಾಲಯಗಳು ಕಾರ್ಯನಿರ್ವಹಿಸುತ್ತಿವೆ.

ಶಿವಮೊಗ್ಗ, ಹಾಸನ, ಬೀದರ್, ಕಾರವಾರ ಮತ್ತು ಚಿತ್ರದುರ್ಗಗಳಲ್ಲಿರುವ ಜಿಲ್ಲಾ ಆಸ್ಪತ್ರೆಗಳಲ್ಲಿ ಮತ್ತು ಬೆಂಗಳೂರಿನಲ್ಲಿರುವ ಕೆ. ಸಿ, ಸಾರ್ವಜನಿಕ ಆಸ್ಪತ್ರೆಯಲ್ಲಿ ಮಾನಸಿಕ ರೋಗ ಚಿಕಿತ್ಸಾಲಯಗಳು ಕಾರ್ಯ ನಿರ್ವಹಿಸುತ್ತಿವೆ.

ಶಿವಮೊಗ್ಗ, ಹಾಸನ, ತುಮಕೂರು, ಚಿತ್ರದುರ್ಗ, ಕೋಲಾರ, ಮಂಡ್ಯ ಮತ್ತು ಬಿಜಾಪುರ ಗಳಲ್ಲಿರುವ ಜಿಲ್ಲಾ ಆಸ್ಪತ್ರೆಗಳಲ್ಲಿ ಪ್ರಾಕೃತಿಕ ಚಿಕಿತ್ಸಾ ಘಟಕಗಳು ಕಾರ್ಯನಿರ್ವಹಿಸುತ್ತಿರುತ್ತವೆ. ಎಲ್ಲಾ ಬೋಧಕ ಆಸ್ಪತ್ರೆಗಳಲ್ಲಿಯೂ ಪ್ರಾಕೃತಿಕ ಚಿಕಿತ್ಸಾ ಘಟಕಗಳು ಕಾರ್ಯನಿರ್ವಹಿಸುತ್ತಿರುತ್ತವೆ. ಬೆಂಗಳೂರಿನಲ್ಲಿರುವ ಕೆ. ಸಿ. ಸಾರ್ವಜನಿಕ ಆಸ್ಪತ್ರೆಯಲ್ಲಿ ಮತ್ತು ಜಯನಗರ ಸಾರ್ವಜನಿಕ ಆಸ್ಪತ್ರೆ ಯಲ್ಲಿಯೂ ಕೂಡ ಪ್ರಾಕೃತಿಕ ಚಿಕಿತ್ಸಾ ಘಟಕ ಕಾರ್ಯಗಳು ನಿರ್ವಹಿಸುತ್ತಿವೆ.

ತುರ್ತು ಮತ್ತು ಆಕಸ್ಮಿಕ ವಿಭಾಗಗಳು ದಿನವಿಡೀ ಕಾರ್ಯನಿರ್ವಹಿಸುತ್ತವೆ. ಆರ್ಥಿಕ ಸಂಪನ್ಮೂಲಕ್ಕೆ ಅನುಗುಣವಾಗಿ ರಾಜ್ಯದ ಎಲ್ಲಾ ಜಿಲ್ಲಾ ಆಸ್ಪತ್ರೆಗಳಲ್ಲಿ ಮತ್ತು ಎಲ್ಲಾ ದೊಡ್ಡ ಆಸ್ಪತ್ರೆ ಗಳಲ್ಲಿರುವ ರಕ್ತ ನಿಧಿ ಕೇಂದ್ರಗಳನ್ನು ಬಲಪಡಿಸಲಾಗುತ್ತದೆ.

ರೇಡಿಯಾಲಜಿ ಸೇವೆಯು ಎಲ್ಲಾ ಜಿಲ್ಲಾ ಆಸ್ಪತ್ರೆಗಳಲ್ಲಿ, ದೊಡ್ಡ ಆಸ್ಪತ್ರೆಗಳಲ್ಲಿ ಮತ್ತು ಕೆಲವು ತಾಲ್ಲೂಕು ಮಟ್ಟದ ಆಸ್ಪತ್ರೆಗಳಲ್ಲಿ ಲಭ್ಯವಿರುತ್ತದೆ. ದಂತ ಚಿಕಿತ್ಸಾ ವಿಭಾಗವನ್ನು ಎಲ್ಲಾ ಜಿಲ್ಲಾ ಆಸ್ಪತ್ರೆಗಳಲ್ಲಿ, ದೊಡ್ಡ ಆಸ್ಪತ್ರೆಗಳಲ್ಲಿ ಮತ್ತು ಕೆಲವು ತಾಲ್ಲೂಕು ಮಟ್ಟದ ಆಸ್ಪತ್ರೆಗಳಲ್ಲಿ ಸ್ಥಾಪಿಸಲಾಗಿದೆ.

ಬೆಂಗಳೂರು, ಮೈಸೂರು ಮತ್ತು ಕೆ.ಜಿ.ಎಫ್.ನಲ್ಲಿರುವ ಸಾಂಕ್ರಾಮಿಕ ರೋಗ ಆಸ್ಪತ್ರೆಗಳು ವಿಶೇಷ ರೀತಿಯ ಆಸ್ಪತ್ರೆಗಳಾಗಿದ್ದು ಇವುಗಳು ಕಾಲರ, ಕರುಳುಬೇನೆ, ಗಂಟಲುಮಾರಿ, ಧನುರ್ವಾಯು ನಾಯಿಕೆಮ್ಮು, ಹುಚ್ಚುನಾಯಿ ಕಡಿತ, ದಢಾರ, ಸಂಶಯಾಸ್ಪದ ಸೀತಳ ಸಿಡುಬು ರೋಗ ಮತ್ತು ಇತರೆ ಅಂಟುಜಾಡ್ಯಗಳಂತಹ ಸಾಂಕ್ರಾಮಿಕ ರೋಗಗಳಿಗೆ ಚಿಕಿತ್ಸೆ ನೀಡುತ್ತವೆ.

## ಗ್ರಾಮೀಣ ಆರೋಗ್ಯ ಕಾರ್ಯಕ್ರಮಗಳು

ಕನಿಷ್ಠಾವಶ್ಯಕತೆ ಕಾರ್ಯಕ್ರಮ (ಗ್ರಾಮೀಣ ಆರೋಗ್ಯ) ಅನುಷ್ಠಾನದ ಅಡಿಯಲ್ಲಿ ಭಾರತ ಸರ್ಕಾರದ ಮಾರ್ಗದರ್ಶನಗಳಿಗನುಗುಣವಾಗಿ ರಾಜ್ಯ ಸರ್ಕಾರವು ಮೂರು ಹಂತಗಳ ಅಂದರೆ, ಉಪ ಕೇಂದ್ರ, ಪ್ರಾಥಮಿಕ ಆರೋಗ್ಯ ಕೇಂದ್ರ ಮತ್ತು ಸಮುದಾಯ ಆರೋಗ್ಯ ಕೇಂದ್ರ ಎಂಬ ಆರೋಗ್ಯ ಸಂಸ್ಥೆಗಳನ್ನು ಸ್ಥಾಪಿಸಲು ತೀರ್ಮಾನಿಸಿದೆ;

ಈ ಹಿಂದೆ ಕಾರ್ಯ ನಿರ್ವಹಿಸುತ್ತಿದ್ದ ಪ್ರಾಥಮಿಕ ಆರೋಗ್ಯ ಘಟಕಗಳನ್ನು ಹಂತ ಹಂತವಾಗಿ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನಾಗಿ ಮೇಲ್ದರ್ಜೆಗೇರಿಸಲಾಗುತ್ತಿದೆ.

### 1) ಸಮುದಾಯ ಆರೋಗ್ಯ ಕೇಂದ್ರ.—

ಪ್ರತಿ ನಾಲ್ಕು ಪ್ರಾಥಮಿಕ ಆರೋಗ್ಯ ಕೇಂದ್ರಗಳಿಗೆ : ಒಂದು ಲಕ್ಷ ಜನಸಂಖ್ಯೆಗೆ ಒಂದು ಸಮುದಾಯ ಆರೋಗ್ಯ ಕೇಂದ್ರವನ್ನು ಸ್ಥಾಪಿಸುವುದು ಭಾರತ ಸರ್ಕಾರದ ಮತ್ತು ರಾಜ್ಯ ಸರ್ಕಾರದ ಉದ್ದೇಶವಾಗಿರುತ್ತದೆ. ರಾಜ್ಯದ ಎಲ್ಲಾ ತಾಲ್ಲೂಕುಗಳ ಆರೋಗ್ಯ ಸಂಸ್ಥೆಗಳನ್ನು 30 ಹಾಸಿಗೆಗಳ ಆಸ್ಪತ್ರೆಗಳನ್ನಾಗಿ ಮತ್ತು ಉಪ ವಿಭಾಗ ಕೇಂದ್ರ ಸ್ಥಾನದ ತಾಲ್ಲೂಕುಗಳನ್ನು 50 ಹಾಸಿಗೆಗಳ ಆಸ್ಪತ್ರೆಗಳನ್ನಾಗಿ ಮೇಲ್ದರ್ಜೆಗೇರಿಸುವುದು ಸರ್ಕಾರದ ಕಾರ್ಯನೀತಿಯಾಗಿರುತ್ತದೆ. ಈ ಸಂಸ್ಥೆಗಳು ಗ್ರಾಮಾಂತರ ಪರಾಮರ್ಶಕ ಆಸ್ಪತ್ರೆಗಳಾಗಿ ಕಾರ್ಯನಿರ್ವಹಿಸುತ್ತವೆ.

30 ಹಾಸಿಗೆಗಳ ಆಸ್ಪತ್ರೆಗಳು ಕೆಳಕಂಡ ಕನಿಷ್ಠ ನಾಲ್ಕು ವಿಶೇಷ ಸೌಲಭ್ಯಗಳನ್ನು ಹೊಂದಿರುತ್ತವೆ.

1) ಸಾಮಾನ್ಯ ವೈದ್ಯಶಾಸ್ತ್ರ
2) ಸಾಮಾನ್ಯ ಶಸ್ತ್ರ ಚಿಕಿತ್ಸೆ
3) ಪ್ರಸೂತಿ ಮತ್ತು ಸ್ತ್ರೀರೋಗ ಚಿಕಿತ್ಸೆ
4) ದಂತ ಶಸ್ತ್ರ ಚಿಕಿತ್ಸೆ

50 ಹಾಸಿಗೆಯುಳ್ಳ ಆಸ್ಪತ್ರೆಗಳಲ್ಲಿ ಮೇಲ್ಕಂಡ ನಾಲ್ಕು ವಿಶೇಷ ಸೌಲಭ್ಯಗಳ ಜೊತೆಗೆ ಕಿವಿ, ಮೂಗು, ಗಂಟಲು ಚಿಕಿತ್ಸೆ ಮತ್ತು ಮಕ್ಕಳ ಚಿಕಿತ್ಸಾ ಸೌಲಭ್ಯಗಳಿರುತ್ತವೆ.

### 2) ಪ್ರಾಥಮಿಕ ಆರೋಗ್ಯ ಕೇಂದ್ರ.—

ಪ್ರಾಥಮಿಕ ಆರೋಗ್ಯ ಕೇಂದ್ರಗಳು ರೋಗ ನಿರೋಧಕ, ಮುಂಜಾಗರೂಕತೆ ಮತ್ತು ಆರೋಗ್ಯ ಉತ್ತೇಜಕ ಸೇವೆಗಳನ್ನು ಒದಗಿಸುತ್ತವೆ. ಇವುಗಳಲ್ಲದೆ ರಾಷ್ಟ್ರೀಯ ಮತ್ತು ರಾಜ್ಯದ ಆರೋಗ್ಯ ಕಾರ್ಯಕ್ರಮಗಳನ್ನು ಕೂಡ ಒದಗಿಸುತ್ತವೆ.

ಭಾರತ ಸರ್ಕಾರದ ಮಾರ್ಗ ಸೂಚಿಗನುಗುಣವಾಗಿ ಕ್ರಿ. ಶ. ಎರಡು ಸಾವಿರದ ವೇಳೆಗೆ ಮೈದಾನ ಪ್ರದೇಶಗಳಲ್ಲಿ ಪ್ರತಿ ಮೂವತ್ತು ಸಾವಿರ ಜನಸಂಖ್ಯೆಗೆ ಒಂದು ಪ್ರಾಥಮಿಕ ಆರೋಗ್ಯ ಕೇಂದ್ರ, ಮತ್ತು ಗುಡ್ಡಗಾಡು ಮತ್ತು ಬುಡಕಟ್ಟು ಜನಾಂಗದವರು ವಾಸಿಸುವ ಪ್ರದೇಶಗಳಲ್ಲಿ ಪ್ರತಿ ಇಪ್ಪತ್ತು ಸಾವಿರ ಜನಸಂಖ್ಯೆಗೆ ಒಂದು ಪ್ರಾಥಮಿಕ ಆರೋಗ್ಯ ಕೇಂದ್ರ ಇರುತ್ತದೆ.

### 3) ಪ್ರಾಥಮಿಕ ಆರೋಗ್ಯ ಘಟಕ.—

ಕರ್ನಾಟಕ ರಾಜ್ಯದಲ್ಲಿ 1978–79ನೇ ಸಾಲಿಗೆ ಹಿಂದೆ ಇದ್ದ ವಿವಿಧ ಮಾದರಿಯ ಚಿಕಿತ್ಸಾಲಯಗಳನ್ನು ಪ್ರಾಥಮಿಕ ಆರೋಗ್ಯ ಘಟಕಗಳೆಂದು ಪುನರ್ ನಾಮಕರಣ ಮಾಡಲಾಯಿತು. ಈ ಘಟಕಗಳು ರೋಗ ಮುಂಜಾಗರೂಕತೆ, ರೋಗ ನಿರೋಧಕ ಮತ್ತು ಆರೋಗ್ಯ ಉತ್ತೇಜಕ ಸೇವೆಗಳನ್ನು ಒದಗಿಸುತ್ತವೆ. ಈ ಸಂಸ್ಥೆಗಳನ್ನು ಹಂತ ಹಂತವಾಗಿ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನಾಗಿ ಮೇಲ್ದರ್ಜೆಗೆ ಏರಿಸಲಾಗುತ್ತದೆ ಮತ್ತು ಹೆಚ್ಚುವರಿ ಸಿಬ್ಬಂದಿಯನ್ನು ಒದಗಿಸಲಾಗುತ್ತದೆ.

### 4) ಆರೋಗ್ಯ ಉಪ ಕೇಂದ್ರಗಳು.—

ಮೈದಾನ ಪ್ರದೇಶಗಳಲ್ಲಿ ಪ್ರತಿ ಐದು ಸಾವಿರ ಜನಸಂಖ್ಯೆಗೆ ಒಂದು ಆರೋಗ್ಯ ಉಪಕೇಂದ್ರ ಮತ್ತು ಗುಡ್ಡಗಾಡು ಮತ್ತು ಬುಡಕಟ್ಟು ಜನಾಂಗ ವಾಸಿಸುವ ಪ್ರದೇಶದಲ್ಲಿ ಪ್ರತಿ ಮೂರು ಸಾವಿರ ಜನಸಂಖ್ಯೆಗೆ ಒಂದು ಆರೋಗ್ಯ ಉಪಕೇಂದ್ರವನ್ನು ಹೊಂದುವ ಗುರಿಯು ರಾಜ್ಯ ಮತ್ತು ಭಾರತ ಸರ್ಕಾರದ ಉದ್ದೇಶವಾಗಿರುತ್ತದೆ.

ಪ್ರತಿ ಆರೋಗ್ಯ ಉಪಕೇಂದ್ರಗಳಲ್ಲಿ ಒಬ್ಬ ಮಹಿಳಾ ಆರೋಗ್ಯ ಸಹಾಯಕಿ ಮತ್ತು ಒಬ್ಬ ಪುರುಷ ಆರೋಗ್ಯ ಸಹಾಯಕರುಗಳು ಕಾರ್ಯ ನಿರ್ವಹಿಸುತ್ತಿರುತ್ತಾರೆ ಮತ್ತು ಪ್ರತಿ ಉಪ ಕೇಂದ್ರಕ್ಕೂ ಎರಡು ಸಾವಿರ ರೂಪಾಯಿಗಳ ಬೆಲೆ ಬಾಳುವ ಔಷಧಗಳನ್ನು ಒದಗಿಸಲಾಗುತ್ತಿದೆ.

ಗ್ರಾಮೀಣ ಆರೋಗ್ಯ ಸೇವೆಗಳನ್ನು ವಿವಿಧ ಮಾದರಿಯ ಸಂಸ್ಥೆಗಳ ಮೂಲಕ ಒದಗಿಸಲಾಗುತ್ತದೆ. ವಿವರಗಳು ಕೆಳಕಂಡಂತಿರುತ್ತವೆ:

| ಕ್ರಮ ಸಂಖ್ಯೆ | ಸಂಸ್ಥೆಯ ವಿವರಗಳು | 1990-91 | 1991-92 | 1992-93 |
|---|---|---|---|---|
| 1) | ಸಮುದಾಯ ಆರೋಗ್ಯ ಕೇಂದ್ರಗಳು | 160 | 184 | 186 |
| 2) | ಪ್ರಾಥಮಿಕ ಆರೋಗ್ಯ ಕೇಂದ್ರಗಳು | 1198 | 1262 | 1287 |
| 3) | ಪ್ರಾಥಮಿಕ ಆರೋಗ್ಯ ಘಟಕಗಳು | 626 | 623 | 623 |
| 4) | ಉಪ ಕೇಂದ್ರಗಳು | 7793 | 7793 | 7793 |
| 5) | ಹಾಸಿಗೆಗಳು | 9264 | 10900 | 11563 |

* ನವೆಂಬರ್ 92ರ ಅಂತ್ಯದಲ್ಲಿದ್ದಂತೆ.

## ಕುಟುಂಬ ಕಲ್ಯಾಣ, ತಾಯಿ ಮಕ್ಕಳ ಆರೋಗ್ಯ ಕಾರ್ಯಕ್ರಮ:—

### (1) ಕುಟುಂಬ ಕಲ್ಯಾಣ:—

"ಕ್ರಿ.ಶ. 2000 ವರ್ಷಕ್ಕೆ ಸರ್ವರಿಗೂ ಆರೋಗ್ಯ" ಎಂಬ ಅಲ್ಮಾ ಆಟಾ ಘೋಷಣೆಯ ಅಡಿಯಲ್ಲಿ ರಾಷ್ಟ್ರೀಯ ಕುಟುಂಬ ಕಲ್ಯಾಣ ಕಾರ್ಯಕ್ರಮವು ಆರೋಗ್ಯ ಕಾರ್ಯಕ್ರಮಗಳ ಒಂದು ಅವಿಭಾಜ್ಯ ಅಂಗವಾಗಿದೆ. ಕರ್ನಾಟಕ ರಾಜ್ಯ ಹಾಗೂ ದೇಶದಲ್ಲಿ ಜನಸಂಖ್ಯೆಯು ಬಹಳ ತ್ವರಿತವಾಗಿ ಬೆಳೆಯುತ್ತಿದೆ. ಇದರಿಂದ ಯೋಜಿತ ಅಭಿವೃದ್ಧಿ ಕಾರ್ಯಕ್ರಮಗಳ ಪರಿಣಾಮ ಶೂನ್ಯವಾಗಿದೆ. ಇದನ್ನು ಅರಿತು ದೇಶದಲ್ಲಿ ಪಂಚವಾರ್ಷಿಕ ಯೋಜನೆಯು ಪ್ರಾರಂಭವಾದಾಗಿನಿಂದ ಯೋಜನೆಯಲ್ಲಿ ಜನಸಂಖ್ಯಾ ಬೆಳವಣಿಗೆಯನ್ನು ತಡೆಗಟ್ಟುವ ಕಾರ್ಯಕ್ರಮಗಳಿಗೆ ಹೆಚ್ಚಿನ ಆದ್ಯತೆಯನ್ನು ಕೊಟ್ಟಿದೆ. ಇದರ ಪರಿಣಾಮವಾಗಿ ಕುಟುಂಬ ಕಲ್ಯಾಣ ಕಾರ್ಯಕ್ರಮವು ರಾಷ್ಟ್ರೀಯ ಕಾರ್ಯಕ್ರಮವಾಗಿ 1952 ರಿಂದ ಜಾರಿಗೆ ಬಂದಿದೆ.

ಕುಟುಂಬ ಕಲ್ಯಾಣ ಕಾರ್ಯಕ್ರಮವನ್ನು ಈ ಕೆಳಗಿನ ಧ್ಯೇಯೋದ್ದೇಶದೊಂದಿಗೆ ಜಾರಿಗೆ ತರಲಾಗಿದೆ.

(ಅ) ಈಗಿರುವ ಸ್ಥೂಲ ಜನನ ಪ್ರಮಾಣವನ್ನು ಪ್ರತಿ ಸಾವಿರ ಜನಸಂಖ್ಯೆಗೆ 26.8 ರಿಂದ 21ಕ್ಕೆ ಇಳಿಸುವುದು.

(ಆ) ಈಗ ಇರುವ ಮರಣ ಪ್ರಮಾಣ 9ನ್ನು 7ಕ್ಕೆ ಇಳಿಸುವುದು.

(ಇ) ಈಗಾಗಲೇ ಇರುವ ಶಿಶು ಮರಣ ಪ್ರಮಾಣವನ್ನು (ಪ್ರತಿ ಸಾವಿರ ಜೀವಂತ ಜನನಕ್ಕೆ 77)60 ಕ್ಕಿಂತ ಕಡಿಮೆ ಮಾಡುವುದು.

(ಈ) ನಿವ್ವಳ ಸಂತಾನೋತ್ಪತ್ತಿಯನ್ನು 1ಕ್ಕೆ ಇಳಿಸುವುದು.

(ಉ) ಎರಡು ಮಕ್ಕಳ ನೀತಿಯನ್ನು ಸಾಧಿಸುವುದು.

(ಊ) ಅರ್ಹ ದಂಪತಿಗಳ ರಕ್ಷಣಾ ದರವನ್ನು ಈಗ ಇರುವ ಶೇಕಡ 49.1ನ್ನು 1996-97ರ ವೇಳೆಗೆ ಶೇಕಡ 60ಕ್ಕೆ ಏರಿಸುವುದು.

ಕುಟುಂಬ ಕಲ್ಯಾಣ ಕಾರ್ಯಕ್ರಮವನ್ನು ಭಾರತ ಸರ್ಕಾರದ ಶೇಕಡ 100ರ ಅನುದಾನದ ಮೂಲಕ ಎರಡನೇ ಪಂಚವಾರ್ಷಿಕ ಯೋಜನೆಯಿಂದ ಅನುಷ್ಠಾನಗೊಳಿಸಲಾಗುತ್ತಿದೆ. ಆರೋಗ್ಯ ಕೇಂದ್ರಗಳ ಮೂಲಕ ಕೊಡುತ್ತಿದ್ದ ಸೇವೆಗಳನ್ನು 1964-65 ರಿಂದ ಕ್ಷೇತ್ರ ಕಾರ್ಯಕರ್ತರ ಮೂಲಕ ಸ್ಥಳದಲ್ಲಿಯೇ ಸೇವೆಗಳನ್ನು ಒದಗಿಸುವ ವ್ಯಾಪಕ ಕಾರ್ಯಕ್ರಮವಾಗಿ ಬದಲಾಯಿಸಲಾಯಿತು. ಕುಟುಂಬ ಕಲ್ಯಾಣ ಕಾರ್ಯಕ್ರಮಕ್ಕೆ ಹೆಚ್ಚಿನ ಆದ್ಯತೆ ಕೊಟ್ಟಿರುವುದರಿಂದ 1966-67 ರಿಂದ ಈ ಕಾರ್ಯಕ್ರಮವನ್ನು ಆಡಳಿತಾತ್ಮಕ ಮತ್ತು ಆರ್ಥಿಕ ನೆರವಿನೊಂದಿಗೆ ನಿರ್ದಿಷ್ಟ ಗುರಿಯನ್ನೊಳಗೊಂಡ ಮತ್ತು ಕಾಲಬದ್ಧವಾದ ಕಾರ್ಯಕ್ರಮವನ್ನಾಗಿ ಜಾರಿಗೊಳಿಸಲಾಗುತ್ತಿದೆ.

ಸೇವಾ ಸೌಲಭ್ಯಗಳು ;

ಕುಟುಂಬ ಕಲ್ಯಾಣ ಕಾರ್ಯಕ್ರಮದ ಸೇವೆಗಳನ್ನು 1962 ಪ್ರಾಥಮಿಕ ಆರೋಗ್ಯ ಕೇಂದ್ರಗಳು, 623 ಪ್ರಾಥಮಿಕ ಆರೋಗ್ಯ ಘಟಕಗಳು, 7793 ಉಪ ಕೇಂದ್ರಗಳು, ಸರ್ಕಾರದಿಂದ, ಸ್ವಯಂ ಸೇವಾ ಸಂಸ್ಥೆಗಳಿಂದ ಮತ್ತು ಸ್ಥಳೀಯ ಸಂಸ್ಥೆಗಳಿಂದ ನಡೆಸಲ್ಪಡುತ್ತಿರುವ 102 ನಗರ ಕುಟುಂಬ ಕಲ್ಯಾಣ ಕೇಂದ್ರಗಳು ಮತ್ತು 103 ಪ್ರಸೂತಿ ಸೇವಾ ಕೇಂದ್ರಗಳ (ಸರ್ಕಾರದ ಮತ್ತು ಸ್ವಯಂ ಸೇವಾ ಸಂಸ್ಥೆಗಳಿಂದ ನಡೆಸಲ್ಪಡುತ್ತಿರುವ) ಮೂಲಕ ಒದಗಿಸಲಾಗುತ್ತಿದೆ.

ಕುಟುಂಬ ಕಲ್ಯಾಣ ಮತ್ತು ತಾಯಿ ಮಕ್ಕಳ ಆರೋಗ್ಯ ಕಾರ್ಯಕ್ರಮವನ್ನು ಜಾರಿಗೆ ತರುವಲ್ಲಿ ನಿರ್ದಿಷ್ಟ ಕ್ಷೇತ್ರಗಳ ಮೂಲಕ ಸೇವೆಗಳನ್ನು ಒದಗಿಸುವ ಮಾರ್ಗವನ್ನು ಅಳವಡಿಸಲಾಗಿದೆ. ಕುಟುಂಬ ಕಲ್ಯಾಣ ವಿಧಾನಗಳಿಂದ ಸಂತಾನಹರಣ ಶಸ್ತ್ರ ಚಿಕಿತ್ಸೆ ಮತ್ತು ಅಂತರ ವಿಧಾನಗಳ ಸೇವೆಗಳನ್ನು ಸಂಸ್ಥೆಗಳ ಮತ್ತು ಶಿಬಿರಗಳ ಮೂಲಕ ಒದಗಿಸಲಾಗುತ್ತಿದೆ. ಗರ್ಭನಿರೋಧಕ ಸಾಧನೆಗಳನ್ನು ಅರ್ಹ ದಂಪತಿಗಳಿಗೆ ತರಬೇತಿ ಪಡೆದ ಆರೋಗ್ಯ ಕಾರ್ಯಕರ್ತರ ಮೂಲಕ ಮನೆಗಳಿಗೆ ಹತ್ತಿರದಲ್ಲಿ ಒದಗಿಸಲಾಗುತ್ತಿದೆ.

ರಾಜ್ಯದಲ್ಲಿ ಕುಟುಂಬ ಕಲ್ಯಾಣ ಕಾರ್ಯಕ್ರಮವನ್ನು ಪರಿಣಾಮಕಾರಿಯಾಗಿ ಜಾರಿಗೆ ತರುವಲ್ಲಿ ಮಾಡಿದ ವ್ಯವಸ್ಥೆಗಳು.—

ಒದಗಿಸಿರುವ ಹೆಚ್ಚುವರಿ ಉತ್ತೇಜಕಗಳು ಮತ್ತು ಇತರೆ ಸೌಲಭ್ಯಗಳು

ಅ) ಕುಟುಂಬದ ಗಾತ್ರವನ್ನು ಮಿತಿಗೊಳಿಸುವ ಸಲುವಾಗಿ ಶಸ್ತ್ರ ಚಿಕಿತ್ಸೆಗೆ ಒಳಪಡುವ ಅರ್ಹ ದಂಪತಿಗಳನ್ನು ಹೆಚ್ಚು ಹೆಚ್ಚು ಆಕರ್ಷಿಸುವಂತೆ ಮಾಡಲು ಕೇಂದ್ರ ಸರ್ಕಾರದಿಂದ ಈ ಕೆಳಗಿನ ಪ್ರೋತ್ಸಾಹ ಧನವನ್ನು ನೀಡಲಾಗುತ್ತಿದೆ.

| ವಿವರಗಳು | ಮಹಿಳಾ ಶಸ್ತ್ರಚಿಕಿತ್ಸೆ (ರೂ. ಗಳು) | ಪುರುಷ ಶಸ್ತ್ರ ಚಿಕಿತ್ಸೆ (ರೂ. ಗಳು) | ಕಾಪರ್‌ಟಿ ಅಳವಡಿಕೆ (ರೂ. ಗಳು) | ಗರ್ಭಪಾತದ ನಂತರ ಕಾಪರ್‌ಟಿ ಅಳವಡಿಕೆ (ರೂ. ಗಳು) |
|---|---|---|---|---|
| 1) ನಗದು ಪರಿಹಾರ | 100-00 | 100-00 | 9.00 | 8.00 |
| 2) ಆಹಾರ ಭತ್ಯೆ | 30-00 | 10-00 | — | — |
| 3) ಸಾಗಣೆ | 15-00 | 15-00 | — | — |

ಇತರ ಖರ್ಚುಗಳು :—

| | | | | |
|---|---|---|---|---|
| ಔಷಧಿ | 25-00 | 15-00 | — | — |
| ಸಾದಿಲ್ವಾರು | 30-00 | 40-00 | — | — |

ಆ) ಪುರುಷರ ಶಸ್ತ್ರಚಿಕಿತ್ಸೆಗೆ 10 ರೂ. ನಂತೆ ಮತ್ತು ಮಹಿಳೆಯರ ಶಸ್ತ್ರಚಿಕಿತ್ಸೆಗೆ 50 ರೂ. ನಂತೆ ರಾಜ್ಯ ಸರ್ಕಾರವು ಕೊಡುತ್ತಿದ್ದ ಹೆಚ್ಚುವರಿ ಪ್ರೋತ್ಸಾಹ ಧನವನ್ನು ನಿಲ್ಲಿಸಲಾಗಿದೆ. ಇದರ ಬದಲು, ಒಂದು ಅಥವಾ ಎರಡು ಹೆಣ್ಣು ಮಕ್ಕಳನ್ನು ಮಾತ್ರ ಹೊಂದಿರುವ ಅರ್ಹ ದಂತಪತಿಗಳನ್ನು ಸಂತಾನಹರಣ ಶಸ್ತ್ರ ಚಿಕಿತ್ಸೆಯನ್ನು ಮಾಡಿಸಿಕೊಳ್ಳಲು ಪ್ರೋತ್ಸಾಹಿಸುವ ಉದ್ದೇಶದಿಂದ 'ಆರೋಗ್ಯ ವಿಮಾ ಯೋಜನೆ'' ಎಂಬ ಹೊಸ ಯೋಜನೆಯನ್ನು ಜಾರಿಗೆ ತರಲು ಸರ್ಕಾರಕ್ಕೆ ಪ್ರಸ್ತಾವನೆ ಕಳುಹಿಸಲಾಗಿದೆ.

ಇ) ಅರ್ಹ ದಂಪತಿಗಳನ್ನು ಕುಟುಂಬ ಕಲ್ಯಾಣ ಶಸ್ತ್ರಚಿಕಿತ್ಸೆಗೆ ಒಳಪಡಿಸಲು ಆಕರ್ಷಿಸುವ ಸಲುವಾಗಿ ಪ್ರಸ್ತುತ ಜಾರಿಯಲ್ಲಿರುವ ಅದೃಷ್ಟ ಬಹುಮಾನ ಯೋಜನೆಯನ್ನು ಪ್ರತಿ ಜಿಲ್ಲೆಯಲ್ಲಿ ಜಾರಿಗೆ ತಂದಿದ್ದು. ಪ್ರತಿ ಜಿಲ್ಲೆಗೆ ಪ್ರತಿ ತಿಂಗಳಿಗೆ ಈ ಬಗ್ಗೆ ಗೊತ್ತುಮಾಡಿದ 15,000 ರೂ. ಗಳನ್ನು ಮುಂದುವರಿಸಲಾಗಿದೆ.

ಈ) ಎರಡು ಅಥವಾ ಎರಡಕ್ಕಿಂತ ಕಡಿಮೆ ಮಕ್ಕಳನ್ನು ಹೊಂದಿದ್ದು ಶಸ್ತ್ರಚಿಕಿತ್ಸೆಗೆ ಒಳಪಡುವ ಅರ್ಹ ದಂಪತಿಗಳಿಗೆ ಆದ್ಯತೆಯ ಮೇರೆಗೆ ಚಿಕಿತ್ಸೆ ಮತ್ತು ಮನೆ ಮನೆ ನಿವೇಶನ ಮತ್ತು ಇತರೆ ಫಲಗಳನ್ನು ನೀಡುವ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಹೆಚ್ಚಿನ ಆದ್ಯತೆಯನ್ನು ನೀಡುವುದಕ್ಕೋಸ್ಕರ ಹಸಿರು ಪತ್ರದ ವಿತರಣೆಯನ್ನು ಮುಂದುವರಿಸಲಾಗಿದೆ.

ಉ) ಕುಟುಂಬ ಕಲ್ಯಾಣ ಬಳಕೆದಾರರ ಅನುಸರಣಾ ಸೇವೆಯನ್ನು ನೀಡುವ ಸಲುವಾಗಿ ಪ್ರತಿ ಉಪಕೇಂದ್ರಗಳಿಗೆ 2000 ರೂ. ಗಳ ಔಷಧ ಸರಬರಾಜನ್ನು ಮುಂದುವರಿಸಲಾಗಿದೆ.

ಊ) ಒಂದು ಅಥವಾ ಎರಡು ಮಕ್ಕಳನ್ನು ಮಾತ್ರ ಹೊಂದಿದ್ದು ಕುಟುಂಬ ಕಲ್ಯಾಣ ಶಸ್ತ್ರಚಿಕಿತ್ಸೆಗೆ ಒಳಪಡುವ ಸರ್ಕಾರಿ ನೌಕರರು ಹಾಗೂ ಸರ್ಕಾರಿ ಅನುದಾನಿತ ಸಂಸ್ಥೆಗಳ ನೌಕರರುಗಳಿಗೆ ಒಂದು ವಾರ್ಷಿಕ ಬಡ್ತಿಗೆ ಸಮಸಮನಾದ ವಿಶೇಷ ವೇತನವನ್ನು ಮುಂದುವರಿಸಲಾಗುತ್ತಿದೆ.

ಋ) (1) ಕುಟುಂಬ ಕಲ್ಯಾಣ ಪ್ರಗತಿಯನ್ನು ಪರಿಶೀಲಿಸಲು ಜಿಲ್ಲಾ ಮಟ್ಟದ ಮತ್ತು ತಾಲ್ಲೂಕು ಮಟ್ಟದ ಕುಟುಂಬ ಕಲ್ಯಾಣ ಕ್ರಿಯಾ ಸಮಿತಿಗಳನ್ನು ಪುನರ್ ರಚಿಸಲಾಗಿದೆ. ರಾಜ್ಯ ಮಟ್ಟದಲ್ಲಿ ರಾಜ್ಯ ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಜರುಗುವ ಪ್ರತಿ ತ್ರೈಮಾಸಿಕ ಸಭೆಯಲ್ಲಿ ಈ ಕಾರ್ಯಕ್ರಮದ ಪ್ರಗತಿಯನ್ನು ಪರಿಶೀಲಿಸಲಾಗುತ್ತಿದೆ.

2) ಕುಟುಂಬ ಕಲ್ಯಾಣ ಕಾರ್ಯಕ್ರಮದ ಪ್ರಗತಿಯನ್ನು ಪರಿಶೀಲಿಸಲು ರಾಜ್ಯ ಮಟ್ಟದಲ್ಲಿ ಮಾನ್ಯ ಮುಖ್ಯ ಮಂತ್ರಿಯವರ ಅಧ್ಯಕ್ಷತೆಯಲ್ಲಿ ಸಮಿತಿಯೊಂದನ್ನು ರಚಿಸಿದ್ದು ಇದಕ್ಕೆ ಇತರ ಖಾತೆಗಳ ಮಂತ್ರಿಗಳು ಸದಸ್ಯರಾಗಿರುತ್ತಾರೆ.

ೠ) ಖಾಸಗಿ ನರ್ಸಿಂಗ್ ಹೋಂಗಳಿಗೆ ಕುಟುಂಬ ಕಲ್ಯಾಣ ಶಸ್ತ್ರ ಚಿಕಿತ್ಸೆ ಮಾಡಲು ಸರ್ಕಾರ ಮಾನ್ಯತೆ ನೀಡಿದೆ. ಖಾಸಗಿ ವೈದ್ಯರುಗಳಿಗೂ ಸಹ ಈ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳಲು ಅವಕಾಶ ನೀಡಲಾಗಿದೆ.

ಎ) ಸ್ವಯಂ ಸೇವಾ ಸಂಸ್ಥೆ ಮತ್ತು ಸ್ಥಳೀಯ ಸಂಸ್ಥೆಗಳಿಗೂ ಸಹ ಈ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳುವಂತೆ ಮಾಡಲಾಗಿದೆ. ಸದರಿ ಸಂಸ್ಥೆಗಳು ಅನುದಾನದ ಮೇಲೆ ಕುಟುಂಬ ಕಲ್ಯಾಣ ಕೇಂದ್ರಗಳನ್ನು ನಡೆಸುತ್ತಿವೆ.

ಏ) ರಾಜ್ಯದ ಇತರೆ ಸರ್ಕಾರಿ ಇಲಾಖೆಗಳಾದ ಮಹಿಳಾ ಮತ್ತು ಮಕ್ಕಳ ಕಲ್ಯಾಣ, ಶಿಕ್ಷಣ, ಕಂದಾಯ, ವಾರ್ತಾ ಮತ್ತು ಪ್ರಚಾರ ಇಲಾಖೆ ಮುಂತಾದ ಇಲಾಖೆಗಳನ್ನು ಈ ಕಾರ್ಯಕ್ರಮದ ಅನುಷ್ಠಾನದಲ್ಲಿ ಕ್ರಿಯಾತ್ಮಕ ಪಾತ್ರವಹಿಸುವಂತೆ ಮಾಡಲಾಗಿದೆ.

1992–93ನೇ ಸಾಲಿನ ನವೆಂಬರ್ 92ರ ಅಂತ್ಯದವರೆಗೆ ಕುಟುಂಬ ಕಲ್ಯಾಣ ಕಾರ್ಯಕ್ರಮದ ಗುರಿ ಮತ್ತು ಸಾಧನೆ ಹಾಗೂ 93ನೇ ಮಾರ್ಚಿ ಅಂತ್ಯದರೆಗೆ ಸಾಧಿಸಬಹುದಾದ ಪ್ರಗತಿಯ ವಿವರಗಳು.–

1992–93ನೇ ಏಪ್ರಿಲ್ ಮಾಹೆಯಿಂದ 92ನೇ ನವೆಂಬರ್ ಮಾಹೆಯ ಅಂತ್ಯದವರೆಗೆ ಕುಟುಂಬ ಕಲ್ಯಾಣ ಶಸ್ತ್ರ ಚಿಕಿತ್ಸೆಯಲ್ಲಿ ಶೇ. 60.34ರಷ್ಟು. ವಂಕಿ ಅಳವಡಿಕೆಯಲ್ಲಿ ಶೇ. 52.60ರಷ್ಟು, ನಿರೋಧ್ ಬಳಕೆದಾರರಲ್ಲಿ ಶೇ. 91.08ರಷ್ಟು ಹಾಗೂ ನುಂಗುವ ಗುಳಿಗೆಗಳ ಬಳಕೆದಾರರಲ್ಲಿ ಶೇ. 69.18ರಷ್ಟು ಪ್ರಗತಿಯನ್ನು ಸಾಧಿಸಲಾಗಿದೆ. 1992–93ನೇ ಸಾಲಿನ ಗುರಿ ಹಾಗೂ ಸಾಧನೆ (ನವೆಂಬರ್ 92ರವರೆಗೆ) ಮತ್ತು 93ರ ಮಾರ್ಚ್ ಅಂತ್ಯದ ವೇಳೆಗೆ ಸಾಧಿಸಬಹುದಾದ ವಿವರಗಳನ್ನು ತಃಖ್ತೆ 1 (ಐಟಂ 1)ರಲ್ಲಿ ಕೊಡಲಾಗಿದೆ.

## 2. ತಾಯಿ ಮತ್ತು ಮಕ್ಕಳ ಆರೋಗ್ಯ ಸೇವೆಗಳು:–

ತಾಯಿ ಮತ್ತು ಮಕ್ಕಳ ಆರೋಗ್ಯ ಸೇವೆಗಳು ಕುಟುಂಬ ಕಲ್ಯಾಣ ಸೇವೆಯಲ್ಲಿ ಪೂರಕ ಪಾತ್ರವನ್ನು ವಹಿಸುತ್ತದೆ. ಈ ಕಾರ್ಯಕ್ರಮವು ಸುಧಾರಿತ ಪ್ರಸವ ಪೂರ್ವ, ಪ್ರಸವ ಕಾಲದಲ್ಲಿ ಆರೈಕೆ, ಪ್ರಸವಾನಂತರದ ಆರೈಕೆ, ಮತ್ತು ಚುಚ್ಚುಮದ್ದಿನ ಸೇವೆಗಳನ್ನು ತಾಯಿ ಮತ್ತು ಮಕ್ಕಳಿಗೆ ಒದಗಿಸಲಾಗುತ್ತಿದೆ, ಮತ್ತು ರಕ್ತಹೀನತೆಯುಳ್ಳ ತಾಯಿಮತ್ತು ಮಕ್ಕಳಿಗೆ, 'ಎ' ಅನ್ನಾಂಗದ ಕೊರತೆ ಯುಳ್ಳ ಮಕ್ಕಳಿಗೆ ಕಬ್ಬಿಣ ಪೌಷ್ಟಿಕಾಂಶ ಮತ್ತು ಫೋಲಿಕ್ ಆಮ್ಲಗಳು ಮತ್ತು ವಿಟಮಿನ್ 'ಎ' ಪೌಷ್ಟಿಕಾಂಶದ ಔಷಧಿಗಳನ್ನು ನೀಡಲಾಗುತ್ತಿದೆ. ಈ ಸೇವೆಗಳಿಂದ ತಾಯಿ ಮಕ್ಕಳ ಆರೋಗ್ಯವು ಸುಧಾರಿಸುವುದಲ್ಲದೆ ಶಿಶುಮರಣ ಪ್ರಮಾಣ ಮತ್ತು ತಾಯಿ ಮರಣ ಪ್ರಮಾಣ ಕಡಿಮೆ ಯಾಗಿ ಕುಟುಂಬ ಕಲ್ಯಾಣದ ವಿಧಾನಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಅಂಗೀಕರಿಸಲು ಸಹಕಾರಿಯಾಗಿರು ತ್ತದೆ.

1992–93ನೇ ಸಾಲಿನ ನವೆಂಬರ್ ಅಂತ್ಯದವರೆಗಿನ ತಾಯಿ ಮಕ್ಕಳ ಆರೋಗ್ಯ ಕಾರ್ಯಕ್ರಮ ದಡಿಯಲ್ಲಿನ ಸಾಧನೆಗಳು ಈ ಕೆಳಕಂಡಂತಿವೆ.

ರಕ್ತಹೀನತೆಯುಳ್ಳ ತಾಯಿ ಮತ್ತು ಮಕ್ಕಳಿಗೆ ಕಬ್ಬಿಣ ಪೌಷ್ಟಿಕಾಂಶ ಮತ್ತು ಫೋಲಿಕ್‌ಆಮ್ಲ ಮಾತ್ರೆಗಳ ವಿತರಣೆಯ ಪ್ರಗತಿಯಲ್ಲಿ ಕ್ರಮವಾಗಿ ವಾರ್ಷಿಕ ಗುರಿಯ ಶೇ. 43.37 ಮತ್ತು 34.29 ರಷ್ಟನ್ನು ಸಾಧಿಸಲಾಗಿದೆ. 1992ರ ನವೆಂಬರ್ ಅಂತ್ಯದವರೆಗೆ ವಾರ್ಷಿಕ ಗುರಿಯ ಶೇ 33.11ರಷ್ಟು ದಾಯಿಯರಿಗೆ ತರಬೇತಿಯನ್ನು ಕೊಡಲಾಗಿದೆ. ಆರೋಗ್ಯ ಸಿಬ್ಬಂದಿ ಮತ್ತು ತರಬೇತಿ ಹೊಂದಿದ ದಾದಿಯರು ಕ್ರಮವಾಗಿ ಶೇ. 43.96 ಮತ್ತು 54.63ರಷ್ಟು ಹೆರಿಗೆಗಳನ್ನು ನಿರ್ವಹಿಸಿರುತ್ತಾರೆ.

1992 93ನೇ ಸಾಲಿನ ವಾರ್ಷಿಕ ಗುರಿ ಹಾಗೂ ನವೆಂಬರ್ 92ರ ಅಂತ್ಯದವರೆಗಿನ ತಾಯಿ ಮಕ್ಕಳ ಆರೋಗ್ಯ ಕಾರ್ಯಕ್ರಮದಡಿಯಲ್ಲಿನ ಸಾಧನೆಗಳನ್ನು ಮತ್ತು ಮಾರ್ಚ್ 93ರ ಅಂತ್ಯದವರೆಗೆ ನಿರೀಕ್ಷಿಸಬಹುದಾದ ಸಾಧನೆಗಳ ವಿವರಗಳನ್ನು ತಃಖ್ತೆ 1(ಐಟಂ 2)ರಲ್ಲಿ ಕೊಡಲಾಗಿದೆ.

## 3. ಸಾರ್ವತ್ರಿಕ ಲಸಿಕಾ ಕಾರ್ಯಕ್ರಮ :

ಕರ್ನಾಟಕ ರಾಜ್ಯದಲ್ಲಿ ಪ್ರತಿ ವರ್ಷವೂ 12 ಲಕ್ಷ ಮಕ್ಕಳು ಜನಿಸುತ್ತಿವೆ. ಇದರಲ್ಲಿ 0.9 ಲಕ್ಷ ಶಿಶುಗಳು ಒಂದು ವರ್ಷ ತಲುಪುವುದರೊಳಗೆ ಮರಣ ಹೊಂದುತ್ತವೆ. 0.15 ಲಕ್ಷ ಶಿಶುಗಳು 5 ವರ್ಷದೊಳಗೆ ಸಾಯುತ್ತವೆ. ಈ 1.05 ಲಕ್ಷ ಮರಣಗಳಲ್ಲಿ ಸುಮಾರು ಅರ್ಧದಷ್ಟು ಶಿಶುಗಳು ತಡೆಗಟ್ಟಬಹುದಾದ ಆರು ಮಕ್ಕಳ ರೋಗಗಳು ಅಂದರೆ, ಗಂಟಲು ಬೇನೆ, ಧನುರ್ವಾಯು, ನಾಯಿ ಕೆಮ್ಮುಗಳಲ್ಲಿ ಪೋಲಿಯೋ, ದಢಾರ ಮತ್ತು ಕ್ಷಯ ಇವುಗಳಿಂದ ಮರಣ ಹೊಂದುತ್ತದೆ, ಎಂದು ಅಂದಾಜು ಮಾಡಲಾಗಿದೆ.

ಮಗುವಿಗೆ 1 ವರ್ಷ ತುಂಬುವುದರೊಳಗಾಗಿ ನೂರಕ್ಕೆ ನೂರರಷ್ಟು ಮಕ್ಕಳಿಗೆ ಮೂರು ವರಸೆ ಡಿಪಿಟಿ ಮತ್ತು ಪೋಲಿಯೋ, ಒಂದು ವರಸೆ ಬಿಸಿಜಿ ಮತ್ತು ಒಂದು ವರಸೆ ದಢಾರ ಲಸಿಕೆಗಳನ್ನು ನೀಡುವ ಧ್ಯೇಯದಿಂದ ಸಾರ್ವತ್ರಿಕ ಲಸಿಕಾ ಕಾರ್ಯಕ್ರಮವನ್ನು 1989-90ರಿಂದ ರಾಜ್ಯದಲ್ಲಿ ಜಾರಿಗೊಳಿಸಲಾಗಿದೆ.

1992-93ನೇ ಸಾಲಿನಲ್ಲಿ (92ರ ನವೆಂಬರ್ ಅಂತ್ಯದವರೆಗೆ) ಈ ಕಾರ್ಯಕ್ರಮದಡಿಯಲ್ಲಿ ಆರು ಲಸಿಕೆಗಳಾದ ಡಿಪಿಟಿ, ಓಪಿವಿ, ಬಿಸಿಜಿ ಮತ್ತು ದಢಾರ ವಿರುದ್ಧದ ಲಸಿಕೆ ನೀಡುವಲ್ಲಿ ಕ್ರಮವಾಗಿ ವಾರ್ಷಿಕ ಗುರಿಯ ಶೇ. 57.15, 57.27,66.95 ಮತ್ತು 51.78ರಷ್ಟು ಪ್ರಗತಿ ಸಾಧಿಸಿದೆ.

1992–93ನೇ ಸಾಲಿನ ವಾರ್ಷಿಕ ಗುರಿ ಹಾಗೂ 1992ರ ನವೆಂಬರ್ ಅಂತ್ಯದವರೆಗಿನ ಸಾಧನೆ ಮತ್ತು 1993ನೇ ಮಾರ್ಚ್ ಅಂತ್ಯದ ವೇಳೆಗೆ ನಿರೀಕ್ಷಿಸಬಹುದಾದ ಸಾಧನೆಗಳ ವಿವರಗಳನ್ನು ತ:ಪ್ತಿ 1 (ಐಟಂ 3)ರಲ್ಲಿ ಕೊಡಲಾಗಿದೆ.

4. ಶಿಶು ಸಂರಕ್ಷಣೆ ಮತ್ತು ಸುರಕ್ಷಿತ ತಾಯ್ತನ ಕಾರ್ಯಕ್ರಮ.—

ಈ ಕಾರ್ಯಕ್ರಮವನ್ನು 1992–93ರಲ್ಲಿ ಈ ಕೆಳಗಿನ ಧ್ಯೇಯಗಳೊಂದಿಗೆ ಏಳು ಜಿಲ್ಲೆಗಳಲ್ಲಿ ಅಂದರೆ, ಚಿಕ್ಕಮಗಳೂರು, ಬೆಂಗಳೂರು ಗ್ರಾಮಾಂತರ, ಬೆಂಗಳೂರು, ಕೋಲಾರ, ತುಮಕೂರು, ಶಿವಮೊಗ್ಗ ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ಜಾರಿಗೆ ತರಲಾಗಿದೆ.

1. ಶಿಶು ಮರಣವನ್ನು 2000 ಇಸವಿಯ ವೇಳೆಗೆ 71ರಿಂದ 50ಕ್ಕೆ ಇಳಿಸುವುದು.

2. ಮಕ್ಕಳ ಮರಣ ದರವಾದ 41ನ್ನು 10ಕ್ಕಿಂತ ಕಡಿಮೆ ಮಾಡುವುದು.

3. ತಾಯಿಯ ಮರಣ ದರವನ್ನು 4ರಿಂದ 2ಕ್ಕೆ ಇಳಿಸುವುದು.

4. 2000 ಇಸವಿಯ ಹೊತ್ತಿಗೆ ಪೋಲಿಯೋ ನಿರ್ಮೂಲನೆ.

5. ಬಾಣಂತಿಯರಿಗೆ ಬರಬಹುದಾದ ಧನುರ್ವಾಯು ರೋಗವನ್ನು (ನಿಯೋ ನೇಟಲ್ ಟಿಟನಸ್)1995ರ ವೇಳೆಗೆ ನಿರ್ಮೂಲನೆ.

ಚಿಕ್ಕಮಗಳೂರು, ಬೆಂಗಳೂರು ಗ್ರಾಮಾಂತರ, ಬೆಂಗಳೂರು, ತುಮಕೂರು, ಮತ್ತು ಕೋಲಾರ ಜಿಲ್ಲೆಗಳಲ್ಲಿ ಜಿಲ್ಲೆಯ ತರಬೇತಿದಾರರಿಗೆ (ಕೋರ್‌ಗ್ರೂಪ್ ಟ್ರೈನರ್ಸ್) ತರಬೇತಿಯನ್ನು ಪೂರೈಸಲಾಗಿದೆ.

ಚಿತ್ರದುರ್ಗ ಮತ್ತು ಶಿವಮೊಗ್ಗ ಜಿಲ್ಲೆಯ ತರಬೇತಿದಾರರ ತರಬೇತಿಯನ್ನು ಸಧ್ಯದಲ್ಲೇ ಕೊಡಲಾಗುತ್ತಿದೆ ಮತ್ತು ವೈದ್ಯರಿಗೂ ಮತ್ತು ಅರೆ ವೈದ್ಯ ಸಿಬ್ಬಂದಿಗೂ ಸಹ (ಪ್ಯಾರ ಮೆಡಿಕಲ್ ಸ್ಟಾಫ್) ತರಬೇತಿಯನ್ನು ಕೊಡಲಾಗುವುದು.

5 ಮಾಹಿತಿ, ಶಿಕ್ಷಣ ಮತ್ತು ಸಂಪರ್ಕ:—

ಮಾಹಿತಿ, ಶಿಕ್ಷಣ ಮತ್ತು ಸಂಪರ್ಕವು (ಮಾ. ಶಿ. ಸಂ) ಕುಟುಂಬ ಕಲ್ಯಾಣ ಮತ್ತು ತಾಯಿ ಮಕ್ಕಳ ಆರೋಗ್ಯ ಕಾರ್ಯಕ್ರಮವನ್ನು ಜನರಿಗೆ ಪ್ರಚಾರ ಮಾಡುವಲ್ಲಿಯೂ ಮತ್ತು ಜನಸಮುದಾಯದ ಮನೋಭಾವವನ್ನು ಈ ಕಾರ್ಯಕ್ರಮದೆಡೆಗೆ ಬದಲಾಯಿಸುವಲ್ಲಿಯೂ ಪ್ರಮುಖ ಪಾತ್ರವನ್ನು ವಹಿಸುತ್ತದೆ. ಈ ಚಟುವಟಿಕೆಗಳನ್ನು ಜಿಲ್ಲಾ ಮಟ್ಟದಿಂದ ಗ್ರಾಮ ಮಟ್ಟದವರೆಗೆ ವಿವಿಧ ಮಾಧ್ಯಮಗಳ ಮೂಲಕ ನಡೆಸಲಾಗುತ್ತಿದೆ. ಈ ಕೆಳಕಂಡ ಮುಖ್ಯ ಚಟುವಟಿಕೆಗಳನ್ನು 1992–93ನೇ ಸಾಲಿನಲ್ಲಿ ಯೋಜಿಸಿ ಅನುಷ್ಠಾನಕ್ಕೆ ತರಲಾಗಿದೆ.

1. ರಾಜ್ಯದಲ್ಲಿರುವ 3243 ಮಹಿಳಾ ಸ್ವಾಸ್ಥ್ಯ ಸಂಘಗಳನ್ನು ಮುಂದುವರಿಸುವುದರ ಮೂಲಕ ಕುಟುಂಬ ಕಲ್ಯಾಣ ಮತ್ತು ತಾಯಿ ಮಕ್ಕಳ ಆರೋಗ್ಯ ಶಿಕ್ಷಣ ಚಟುವಟಿಕೆಗಳನ್ನು. ಸೇವೆಗಳನ್ನು ಒದಗಿಸುವುದರೊಂದಿಗೆ ನಡೆಸಲಾಗುತ್ತಿದೆ.

2. ಮಹಿಳಾ ಸ್ವಾಸ್ಥ್ಯ ಸಂಘದ ಕಾರ್ಯಕ್ರಮದಡಿಯಲ್ಲಿ ಎರಡು ಹೊಸ ಕಾರ್ಯಕ್ರಮಗಳನ್ನು ಅಂದರೆ,

ಅ) ಹೊಸದಾಗಿ ಮದುವೆಯಾದ ದಂಪತಿಗಳಿಗಾಗಿ ಸಭೆಗಳನ್ನು ಏರ್ಪಡಿಸುವುದು

ಆ. ಒಂದು ಮಗುವಿರುವ ದಂಪತಿಗಳ ಸಭೆಗಳನ್ನು ನಡೆಸಲು ಈ ವರ್ಷದಲ್ಲಿ ಉದ್ದೇಶಿಸಲಾಗಿದೆ

3. ಜಿಲ್ಲಾ ಮಟ್ಟದಲ್ಲಿ ವೈದ್ಯರು ಮತ್ತು ಮೇಲ್ವಿಚಾರಕರಿಗೆ ಮಾಹಿತಿ, ಶಿಕ್ಷಣ ಮತ್ತು ಸಂಪರ್ಕದ ಬಗ್ಗೆ ತರಬೇತಿಯನ್ನು ಕೊಡುವುದು.

4. ಶಾಲಾ ಉಪಾಧ್ಯಾಯರಿಗೆ, ಸರ್ಕಾರೇತರ ಸಂಘ ಸಂಸ್ಥೆಗಳಿಗೆ, ದಾದಿಯರಿಗೆ ತರಬೇತಿಯನ್ನು ಕೊಡಲಾಗುತ್ತಿದೆ.

5. 1992-93ನೇ ಸಾಲಿನ (ಅಕ್ಟೋಬರ್ 92ರ ಅಂತ್ಯದವರೆಗೆ) ಗುರಿ ಮತ್ತು ಸಾಧನೆಗಳನ್ನು ಈ ಕೆಳಗೆ ಕೊಡಲಾಗಿದೆ.

| | ಚಟುವಟಿಕೆ | ಗುರಿ | ಸಾಧನೆ |
|---|---|---|---|
| 1 | ಮಹಿಳಾ ಸ್ವಾಸ್ಥ್ಯ ಸಂಘ ಮುಂದುವರಿಕೆ | 3940 | 3243 |
| 2 | ಹೊಸದಾಗಿ ಮದುವೆಯಾದ ದಂಪತಿಗಳ ಸಭೆಗಳು | 3940 | 582 |
| 3 | ಒಂದು ಮಗುವುಳ್ಳ ದಂಪತಿಗಳ ಸಭೆಗಳು | 3940 | 572 |
| 4 | ಸದೃಢ ಆರೋಗ್ಯ ಮಕ್ಕಳ ಪ್ರದರ್ಶನ | 3940 | 762 |
| 5 | ಅಂಗನವಾಡಿ ಕಾರ್ಯಕರ್ತೆಯರಿಗೆ ಜಂಟಿ ತರಬೇತಿ | 167 | 80 |
| 6 | ಶಾಲಾ ಉಪಾಧ್ಯಾಯರ ತರಬೇತಿ | 298 | 45 |
| 7 | ಸರ್ಕಾರೇತರ ಸಂಘ ಸಂಸ್ಥೆಗಳ ತರಬೇತಿ | 83 | 5 |
| 8 | ಪದವಿ ಪೂರ್ವ ವಿದ್ಯಾರ್ಥಿಗಳಿಗೆ ಚರ್ಚಾ ಸ್ಪರ್ಧೆ | 191 | 22 |
| 9 | ವಿಶ್ವ ಜನಸಂಖ್ಯಾ ದಿನಾಚರಣೆ | 20 | 20 |
| 10 | ಜಾನಪದ ಮಾಧ್ಯಮದ ಕಾರ್ಯಕ್ರಮ | 1869 | 420 |
| 11 | ಚಲನಚಿತ್ರ ಪ್ರದರ್ಶನ | 4800 | 1767 |
| 12 | ಪತ್ರಿಕಾ ಪ್ರಕಟಣೆಗಳು | — | 86 |
| 13 | ಪತ್ರಿಕಾ ಬಿಡುಗಡೆಗಳು (ಪ್ರೆಸ್ ರಿಲೀಸ್) | — | 1388 |
| 14 | ವೈದ್ಯರಿಗೆ ಮಾಹಿತಿ, ಶಿಕ್ಷಣ, ಸಂಪರ್ಕ ತರಬೇತಿ | 35 | 2 |
| 15 | ಮೇಲ್ವಿಚಾರಕರಿಗೆ ಮಾಹಿತಿ, ಶಿಕ್ಷಣ ಮತ್ತು ಸಂಪರ್ಕ ತರಬೇತಿ | 35 | 2 |

## ತಃಖ್ತೆ 1

1992–93ನೇ ಸಾಲಿನ (ನವೆಂಬರ್ 92ರ ಅಂತ್ಯದವರೆಗೆ) ಕುಟುಂಬ ಕಲ್ಯಾಣ ಸಾರ್ವತ್ರಿಕ ಲಸಿಕಾ ಕಾರ್ಯಕ್ರಮ ಮತ್ತು ತಾಯಿ ಮಕ್ಕಳ ಆರೋಗ್ಯ ಕಾರ್ಯಕ್ರಮ ದಡಿಯಲ್ಲಿನ ಭೌತಿಕ ಗುರಿ ಹಾಗೂ ಸಾಧನೆಗಳು.

| | 1992–93 (92ನೇ ನವೆಂಬರ್ ಅಂತ್ಯದವರೆಗೆ) | | | ನಿರೀಕ್ಷಿಸಲಾಗಿರುವ ಸಾಧನೆ (ಮಾರ್ಚ್ 93ರ ಅಂತ್ಯದ ವರೆಗೆ) |
|---|---|---|---|---|
| | ಗುರಿ | ಸಾಧನೆ | ಶೇಕಡವಾರು | |
| 1. ಕುಟುಂಬ ಕಲ್ಯಾಣ | | | | |
| 1 ಶಸ್ತ್ರ ಚಿಕಿತ್ಸೆ | 3,60,000 | 2.17,229 | 60.34 | 1,42,780 |
| 2 ವಂಕಿಅಳವಡಿಕೆ | 2,90 000 | 1 52,546 | 52.60 | 1,37,454 |
| 3 ನಿರೋಧ್ ಬಳಕೆದಾರರು | 2 80,000 | 2,55,039 | 91.08 | 24,961 |
| 4 ನುಂಗುವ ಮಾತ್ರೆ ಬಳಕೆದಾರರು | 1,12,000 | 77,483 | 69.18 | 34,517 |
| 2: ತಾಯಿ ಮಕ್ಕಳ ಕಾರ್ಯಕ್ರಮ | | | | |
| 1 ತಾಯಿ ಫಲಾನುಭವಿಗಳು | 19,00,000 | 8,24,094 | 43.37 | 10,75,906 |
| 2 ಮಕ್ಕಳ ಫಲಾನುಭವಿಗಳು | 20,00,000 | 6,85,854 | 34.29 | 13,14,146 |
| 3 ದಾದಿಯರ ತರಬೇತಿ | 3,500 | 1.159 | 33.11 | 2,341 |
| 4 ಗರ್ಭಿಣಿಯರ ದಾಖಲೆ | 11,56,400 | 8,64,281 | 74.74 | 2.92 119 |
| 5 ನಿರ್ವಹಿಸಿದ ಹೆರಿಗೆಗಳು | | | | |
| ಅ ಆರೋಗ್ಯ ಕಾರ್ಯಕರ್ತೆಯರಿಂದ | 8,09,480 | 3,55,837 | 43.96 | 4,53.643 |
| ಆ ತರಬೇತಿ ಹೊಂದಿದ ದಾದಿಯರಿಂದ | 2,55,020 | 1,39,319 | 54.63 | 11,57.011 |
| 3 ಲಸಿಕಾ ಕಾರ್ಯಕ್ರಮ | | | | |
| 1 ಡಿ. ಪಿ. ಟಿ. | 11,85,800 | 6,77,675 | 57.15 | 5,08,125 |
| 2 ಪೋಲಿಯೋ | 11.85 800 | 6,79,130 | 57.27 | 5,06,670 |
| 3 ಬಿ.ಸಿ.ಜಿ | 11,85 800 | 7,93,906 | 66 95 | 3,91,894 |
| 4 ದಢಾರ | 11,85'800 | 6,14,045 | 51,78 | 5,71,755 |
| 5 ಡಿ.ಟಿ. | 9,50,000 | 6,03,272 | 63.50 | 3,46,728 |
| 6 ಟಿ.ಟಿ. (ಗರ್ಭಿಣಿಸ್ತ್ರೀ) | 12,75,100 | 7,86,381 | 61.67 | 4,88,719 |
| 7 ಟಿ.ಟಿ. (10 ವರ್ಷಗಳು) | 8,56.000 | 4,38,342 | 51.21 | 4,17,658 |
| 8 ಟಿ.ಟಿ. (16 ವರ್ಷಗಳು) | 8,56.000 | 2,65,328 | 31.00 | 5,90,672 |

## ರಾಷ್ಟ್ರೀಯ ಕುಷ್ಠ ರೋಗ ನಿರ್ಮೂಲನಾ ಕಾರ್ಯಕ್ರಮ

ರಾಜ್ಯದಲ್ಲಿ ಕುಷ್ಠರೋಗವು ಒಂದು ದೊಡ್ಡ ಸಾಮಾಜಿಕ ಮತ್ತು ಸಾರ್ವಜನಿಕ ಆರೋಗ್ಯ ಸಮಸ್ಯೆಯಾಗಿ ಮುಂದುವರಿಯುತ್ತಿದೆ ರಾಷ್ಟ್ರೀಯ ಕುಷ್ಠರೋಗ ನಿರ್ಮೂಲನಾ ಕಾರ್ಯಕ್ರಮಗಳ ಮುಖ್ಯ ಗುರಿ ಕೆಳಕಂಡಂತಿದೆ.

1) ಕುಷ್ಠರೋಗವನ್ನು ಪ್ರಾರಂಭದಲ್ಲಿಯೇ ಗುರುತಿಸಿ ಅವರಿಗೆ ಕ್ರಮಬದ್ಧವಾಗಿ ಚಿಕಿತ್ಸೆಗೆ ಒಳಪಡಿಸಿ, ರೋಗವನ್ನು ಸಮಾಜದಲ್ಲಿ ಹರಡದಂತೆ ತಡೆಗಟ್ಟುವುದು.

2) ಪ್ರಾರಂಭದ ಹಂತದಲ್ಲಿ ಗುರುತಿಸಿದ ರೋಗಿಗಳಿಗೆ ಚಿಕಿತ್ಸೆ ನೀಡಿ ಅಂಗವಿಕಲತೆ ಇಲ್ಲದೆ ಗುಣಪಡಿಸುವುದು.

3) ಕುಷ್ಠ ರೋಗದ ಹರಡುವಿಕೆ, ಚಿಕಿತ್ಸೆ ಕೊಡದಿದ್ದಲ್ಲಿ ಆಗುವ ತೊಂದರೆಗಳು ಮತ್ತು ಕ್ರಮ ಬದ್ಧವಾಗಿ ಚಿಕಿತ್ಸೆ ನೀಡಿದರೆ ರೋಗವನ್ನು ಗುಣಪಡಿಸಲು ಸಾಧ್ಯ ಮತ್ತು ಸಮಾಜದಲ್ಲಿ ಇರುವ ಕಳಂಕ ಮತ್ತು ತಪ್ಪು ಕಲ್ಪನೆಗಳನ್ನು ಹೋಗಲಾಡಿಸುವ ಬಗ್ಗೆ ಆರೋಗ್ಯ ಶಿಕ್ಷಣ ಕಾರ್ಯಕ್ರಮವನ್ನು ಹಮ್ಮಿಕೊಳ್ಳುವುದು.

4) ಗುಣ ಹೊಂದಿದ ಕುಷ್ಠ ರೋಗಿಗಳಿಗೆ (ಅಂಗವಿಕಲತೆ ಇರುವವರಿಗೆ) ಸ್ವಯಂ ಸೇವಾ ಸಂಸ್ಥೆಗಳ ಮೂಲಕ ಪುನರ್ವಸತಿ ಒದಗಿಸುವುದು.

ಮೇಲೆ ಹೇಳಿದ ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತರುವುದರಿಂದ ಕ್ರಿ.ಶ. 2000ದ ಹೊತ್ತಿಗೆ ರೋಗವನ್ನು ನಿಯಂತ್ರಿಸಿ ರಾಷ್ಟ್ರೀಯ ಗುರಿಯನ್ನು ಸಾಧಿಸಬಹುದು.

ಕಾರ್ಯಕ್ರಮಗಳು.—

ರಾಜ್ಯದಲ್ಲಿ ಕುಷ್ಠರೋಗವನ್ನು ನಿರ್ಮೂಲನೆ ಮಾಡುವುದಕ್ಕೆ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ.

ರೋಗಿಗಳನ್ನು ಪತ್ತೆ ಹಚ್ಚುವುದು.—

ಸಾರ್ವಜನಿಕರಲ್ಲಿ, ಶಾಲೆಗಳಲ್ಲಿ, ಕೊಳಗೇರಿ ನಿವಾಸಿಗಳಲ್ಲಿ ಮತ್ತು ರೋಗಿಗಳ ಸಂಬಂಧಿಗಳ ಸಮೀಕ್ಷೆಯಿಂದ ಹೊಸ ರೋಗಿಗಳನ್ನು ಸಮಾಜದಲ್ಲಿ ಪತ್ತೆ ಹಚ್ಚಲಾಗುವುದು. ಸಕ್ರಿಯ ರೋಗ ಪತ್ತೆಯಲ್ಲಿ ರೋಗಿಗಳು ತಾವಾಗಿಯೇ ಬಂದು ಸೋಂಕಿನ ವಿಷಯವನ್ನು ತಿಳಿಸುವುದು, ರೋಗಿಗಳನ್ನು ಸರ್ಕಾರ ಮತ್ತು ಸ್ವಯಂ ಸೇವಾ ಸಂಸ್ಥೆ ಹಾಗೂ ಖಾಸಗೀ ವೈದ್ಯಕೀಯ ಸಂಸ್ಥೆಗಳಿಂದ ಕಳುಹಿಸಲ್ಪಡುವ ಪ್ರಕರಣಗಳ ಮೂಲಕ ರೋಗವನ್ನು ಪತ್ತೆ ಹಚ್ಚುವುದು. ರೋಗ ಪತ್ತೆ ಹಚ್ಚುವ ಬಗೆಗಿನ ವಾರ್ಷಿಕ ಗುರಿಯನ್ನು ನಿಗದಿಪಡಿಸಲಾಗಿದೆ.

ರೋಗಿಗಳ ಚಿಕಿತ್ಸೆ.—

ಎಲ್ಲಾ ರೋಗಿಗಳ, ತಪಾಸಣೆ ಮತ್ತು ಜೀವಾಣು ಪರೀಕ್ಷೆಗೆ ಗುರಿಪಡಿಸಿ ರೋಗ ನಿಧಾನ ಆದನಂತರ ಭಾರತ ಸರ್ಕಾರದ. ಆದೇಶದಂತೆ ಚಿಕಿತ್ಸೆ ನೀಡಲಾಗುವುದು.

ಜಾಗೃತಾ ಕಾರ್ಯ :—

ಎಲ್ಲಾ ರೋಗಿಗಳಿಗೆ ಕ್ರಮಬದ್ಧ ಪೂರ್ಣ ಚಿಕಿತ್ಸೆ ಆದ ಮೇಲೆ ಇವರನ್ನು ತಪಾಸಣೆ ಮತ್ತು ಜೀವಾಣು ಪರೀಕ್ಷೆಗೆ ಗುರಿಪಡಿಸಿ ಚಿಕಿತ್ಸೆಯಿಂದ ಮುಕ್ತಗೊಳಿಸಿದ ಮೇಲೆ ಭಾರತ ಸರ್ಕಾರದ ಆದೇಶದಂತೆ ಜಾಗೃತಾ ಕಾರ್ಯಕ್ರಮವನ್ನು ಪ್ರಾರಂಭಿಸಲಾಗುವುದು.

## ಆರೋಗ್ಯ ಶಿಕ್ಷಣ :—

ಕುಷ್ಠ ರೋಗಿಗಳ ಬಗ್ಗೆ ಸಮಾಜದಲ್ಲಿ ಕಳಂಕ ಮತ್ತು ಮತ್ತು ತಪ್ಪುಕಲ್ಪನೆಗಳು ಇನ್ನೂ ಕಾಣ ಬರುತ್ತಿದೆ. ಸಾಮೂಹಿಕ ಮಾಧ್ಯಮವಾದ ಕಿರು ಚಲನ ಚಿತ್ರಗಳು, ಗುಂಪು ಭಾಷಣಗಳು, ಜನ ಸಂಪರ್ಕ ಮಾಧ್ಯಮಗಳು ಮತ್ತು ಇತರ ಸಾಮೂಹಿಕ ಮಾಧ್ಯಮಗಳ ಮೂಲಕ ಸಮಾಜಕ್ಕೆ ಆರೋಗ್ಯ ಶಿಕ್ಷಣವನ್ನು ಕೊಟ್ಟು ಸಮಾಜದಲ್ಲಿರುವ ತಪ್ಪು ಕಲ್ಪನೆಗಳನ್ನು ತೊಡೆದು ಹಾಕುವ ಕಾರ್ಯಕ್ರಮಗಳನ್ನು ತೆಗೆದುಕೊಳ್ಳಲಾಗುವುದು.

ಕ್ರಿ.ಶ. 2000ದ ಹೊತ್ತಿಗೆ ಕುಷ್ಠರೋಗವನ್ನು ನಿರ್ಮೂಲನೆ ಮಾಡಲು ರಾಜ್ಯದಲ್ಲಿ ಭಾರತ ಸರ್ಕಾರದ ಆದೇಶದಂತೆ ಕಾಲಕಾಲಕ್ಕೆ ಈ ಕೆಳಕಂಡ ಸಂಸ್ಥೆಗಳನ್ನು ಸ್ಥಾಪಿಸಲಾಗಿದೆ.

ಮಾರ್ಚ್ 1992ರ ಕೊನೆಯುವರೆಗೆ ಅನುಮತಿ ಕೊಟ್ಟ ಈ ಸಂಸ್ಥೆಗಳನ್ನು ಸ್ಥಾಪಿಸಲಾಗಿದೆ ;—

| | | | |
|---|---|---|---|
| 1) | ಜಿಲ್ಲಾ ಕುಷ್ಠರೋಗ ನಿವಾರಣಾಧಿಕಾರಿಗಳ ಕಛೇರಿ | — | 20 |
| 2) | ರಾಷ್ಟ್ರೀಯ ಕುಷ್ಠರೋಗ ನಿಯಂತ್ರಣ ಕೇಂದ್ರಗಳು | ... | 31 |
| 3) | ಮಾರ್ಪಾಡಿತ ಕುಷ್ಠರೋಗ ನಿಯಂತ್ರಣ ಘಟಕಗಳು | ... | 12 |
| 4) | ನಗರ ಕುಷ್ಠರೋಗ ಕೇಂದ್ರಗಳು | ... | 48 |
| 4) | ಸಮೀಕ್ಷೆ ಶಿಕ್ಷಣ ಮತ್ತು ಚಿಕಿತ್ಸಾ ಕೇಂದ್ರಗಳು | ... | 677 |
| 6) | ಕುಷ್ಠರೋಗ ತರಬೇತಿ ಕೇಂದ್ರಗಳು | ... | 2 |
| 7) | ಟಿ.ಹೆಚ್.ಡಬ್ಲ್ಯುಗಳು | (22 ಮತ್ತು 4 ಸ್ವಯಂ ಸೇವಾ ಸಂಸ್ಥೆಗಳು) | |
| 8) | ಮೌಲ್ಯಮಾಪನ ಮತ್ತು ಸಮೀಕ್ಷಾ ತಂಡದ ಘಟಕಗಳು | ... | 4 |
| 9) | ಎಪಿಡಮಿಯಲಾಜಿಕಲ್ ಸರ್ವಲೆನ್ಸ್ ಟೀಮ್ | ... | 1 |
| 10) | ಕುಷ್ಠರೋಗ ಹಾಸಿಗೆಗಳು (ಸ್ವಯಂ ಸೇವಾ ಸಂಸ್ಥೆಗಳು) | ... | 100 |

ಮೇಲ್ಕಂಡ ಸಂಸ್ಥೆಗಳಲ್ಲದೆ 26 ಸ್ವಯಂ ಸೇವಾ ಸಂಸ್ಥೆಗಳು ಸಕ್ರಿಯವಾಗಿ ಈ ಕಾರ್ಯಕ್ರಮದಲ್ಲಿ ಭಾಗವಹಿಸುತ್ತಿವೆ.

ಸರ್ಕಾರದ ವೈದ್ಯಕೀಯ ಸಂಸ್ಥೆಗಳು ಕುಷ್ಠ ರೋಗಿಗಳಿಗೆ ಸೇವೆಯನ್ನು ಒದಗಿಸುತ್ತವೆ.

## ರಾಜ್ಯದಲ್ಲಿ ಕುಷ್ಠರೋಗದ ಸ್ಥಾನಿಕತೆ ;—

ಕರ್ನಾಟಕ ರಾಜ್ಯದಲ್ಲಿ ಕುಷ್ಠರೋಗವು ಮಧ್ಯಮ ಪ್ರಮಾಣದ ಸ್ಥಾನಿಕತೆಯುಳ್ಳದೆ. ಒಂದು ಅಂದಾಜಿನ ಪ್ರಕಾರ ರಾಜ್ಯದಲ್ಲಿ 30-11-92ಕ್ಕೆ 42031 ರೋಗಿಗಳು ಇದ್ದಾರೆ. 31-3-1992ರಲ್ಲಿ ಕುಷ್ಠರೋಗದ ಸ್ಥಾನಿಕತೆ ಪ್ರತಿ ಸಾವಿರ ಜನರಿಗೆ 1.1 ರಷ್ಟಿತ್ತು. ಬೆಂಗಳೂರು, ಬೆಳಗಾಂ. ಧಾರವಾಡ, ಬಿಜಾಪುರ- ಗುಲ್ಬರ್ಗಾ, ಬೀದರ್, ರಾಯಚೂರು, ಬಳ್ಳಾರಿ, ಮೈಸೂರು. ಮತ್ತು ಮಂಡ್ಯ ಜಿಲ್ಲೆಗಳಲ್ಲಿ ಬಹು ಔಷಧಿ ಚಿಕಿತ್ಸೆ ವಿಧಾನವನ್ನು ಅಳವಡಿಸಿ ಸ್ಥಾನಿಕತೆಯನ್ನು ಕಡಿಮೆ ಮಾಡಲಾಗಿದೆ ಮತ್ತು ಆ ಜಿಲ್ಲೆಗಳ ಸ್ಥಾನಿಕತೆಯು ಕೆಳಗಿನಂತೆ ಇದೆ.

ಬೆಂಗಳೂರು 0.30, ಬೆಳಗಾಂ 0.49. ಧಾರವಾಡ 0.92, ಬಿಜಾಪುರ 2.40. ಗುಲ್ಬರ್ಗಾ 1.37, ಬೀದರ್, 1.16, ರಾಯಚೂರು 2.45, ಮೈಸೂರು 0,97 ಮಂಡ್ಯ 1.93, ಮತ್ತು ಬಳ್ಳಾರಿ 3.45.

ಪ್ರಸ್ತುತ ವರ್ಷದಲ್ಲಿ 36108 ರೋಗಿಗಳು ಚಿಕಿತ್ಸೆಗಾಗಿ ದಾಖಲಾಗಿದ್ದು ಎಲ್ಲಾ 36103 ರೋಗಿಗಳಿಗೂ ಚಿಕಿತ್ಸೆ ನೀಡಲಾಗಿದೆ.

## ಕುಷ್ಠರೋಗ ನಿರ್ಮೂಲನಾ ಕಾರ್ಯಕ್ರಮದ ಸಾಧನೆ

ರೋಗ ಪತ್ತೆ ಹಚ್ಚುವಿಕೆ ಮತ್ತು ಚಿಕಿತ್ಸೆ :

| | ಗುರಿ | ಸಾಧನೆ | ಶೇಕಡಾವಾರು |
|---|---|---|---|
| ಹೊಸ ರೋಗಿಗಳು | 25000 | 17322 | 69.29 |
| ಚಿಕಿತ್ಸೆ ಪೂರ್ಣಗೊಂಡವು | 46000 | 23167 | 50.36 |

ಬಹು ಔಷಧಿ ಚಿಕಿತ್ಸೆ ಜಾರಿಗೊಳಿಸುವಿಕೆ:

1986 ರಿಂದ ಬೆಳಗಾಂ, ಧಾರವಾಡ ಜಿಲ್ಲೆಗಳಲ್ಲಿ ಭಾರತ ಸರ್ಕಾರ ಮಂಜೂರು ಮಾಡಿದ (ಬಹು ಔಷಧಿ ಚಿಕಿತ್ಸೆ) ಎಂ.ಡಿ.ಟಿ. ಯೋಜನೆಗಳನ್ನು ಜಾರಿಗೊಳಿಸಲಾಗಿದೆ. 1988-89ನೇ ಸಾಲಿನಲ್ಲಿ ಬಹು ಔಷಧಿ ಚಿಕಿತ್ಸೆ ಯೋಜನೆಯನ್ನು ಸಪ್ಟೆಂಬರ್/ಅಕ್ಟೋಬರ್ 1988ರಲ್ಲಿ ರಾಯಚೂರು, ಗುಲ್ಬರ್ಗಾ ಮತ್ತು ಬೀದರ್ ಜಿಲ್ಲೆಗಳಲ್ಲಿ ಬಹು ಔಷಧಿ ಚಿಕಿತ್ಸೆಯನ್ನು ಅನುಷ್ಠಾನಕ್ಕೆ ತರಲಾಯಿತು. 1989-90ನೇ ಸಾಲಿನಲ್ಲಿ (ಬಹು ಔಷಧಿ ಚಿಕಿತ್ಸೆ) ಎಂ.ಡಿ.ಟಿ. ಯೋಜನೆಯನ್ನು 1989ರಲ್ಲಿ ಮೈಸೂರಿನಲ್ಲಿ ಅನುಷ್ಠಾನಗೊಳಿಸಲಾಯಿತು. ಬಳ್ಳಾರಿ ಮತ್ತು ಬಿಜಾಪುರ ಜಿಲ್ಲೆಗಳಲ್ಲಿ (ಬಹು ಔಷಧಿ ಚಿಕಿತ್ಸೆ) ಎಂ.ಡಿ.ಟಿ. ಯೋಜನೆಯನ್ನು ಫೆಬ್ರವರಿ 1990ರಲ್ಲಿ ಅನುಷ್ಠಾನಕ್ಕೆ ತರಲಾಯಿತು. ಬೆಂಗಳೂರು ಜಿಲ್ಲೆಯಲ್ಲಿ ಜೂನ್ 1992ರಲ್ಲಿ ಮಂಡ್ಯ ಜಿಲ್ಲೆಯಲ್ಲಿ ನವೆಂಬರ್ 1992ರಲ್ಲಿ ಮಾರ್ಪಾಡಿಸಿದ ಬಹು ಔಷಧಿ ಚಿಕಿತ್ಸಾ (ಎಂ.ಡಿ.ಟಿ.) ಯೋಜನೆಯನ್ನು ಅನುಷ್ಠಾನಕ್ಕೆ ತರಲಾಯಿತು.

ಬಹು ಔಷಧಿ ಚಿಕಿತ್ಸಾ ಯೋಜನೆಯನ್ನು ಅನುಷ್ಠಾನಕ್ಕೆ ತಂದ ನಂತರ ಬೆಳಗಾಂ ಮತ್ತು ಧಾರವಾಡದಲ್ಲಿ ಇದ್ದ ಸ್ಥಾನಿಕತೆ ಕ್ರಮವಾಗಿ 3.46 ರಿಂದ 0.65ಕ್ಕೆ ಮತ್ತು 4.6 ರಿಂದ 0.83ಕ್ಕೆ ಇಳಿದಿದೆ. ಉಳಿದ ಇನ್ನಿತರ ಜಿಲ್ಲೆಗಳಲ್ಲಿ ಎಂ.ಡಿ.ಟಿ. ಚಿಕಿತ್ಸೆಯು ಮುಂದುವರೆಯುತ್ತಿದೆ. ಬಹು ಔಷಧಿ ಚಿಕಿತ್ಸಾ ಯೋಜನೆಯು ಜಾರಿಯಲ್ಲಿ ಇಲ್ಲದ ಜಿಲ್ಲೆಗಳಲ್ಲಿ ಆಸ್ಪತ್ರೆ, ಪ್ರಾಥಮಿಕ ಆರೋಗ್ಯ ಕೇಂದ್ರ, ಪ್ರಾಥಮಿಕ ಆರೋಗ್ಯ ಘಟಕಗಳಲ್ಲಿ ಕುಷ್ಠ ರೋಗಿಗಳಿಗೆ ವೈದ್ಯಕೀಯ ಮೇಲ್ವಿಚಾರಣೆಯಲ್ಲಿ ಚಿಕಿತ್ಸೆಯನ್ನು ನೀಡಲಾಗುತ್ತಿದೆ ಮತ್ತು ಔಷಧಿಗಳನ್ನು ವಿತರಿಸಲಾಗುತ್ತಿದೆ.

## ಕುಷ್ಠರೋಗ ಸಾಂಕ್ರಾಮಿಕ ಸಮೀಕ್ಷಾ ತಂಡ ಮತ್ತು ಮಾದರಿ ಸಮೀಕ್ಷೆ ಮತ್ತು ಮೌಲ್ಯಮಾಪನ ಘಟಕವು 1992-93ರಲ್ಲಿ ಸಾಧಿಸಿದ ಪ್ರಗತಿ (1-4-1992 ರಿಂದ 31-10-92ರವರೆಗೆ)

ಸಾಂಕ್ರಾಮಿಕ ಸಮೀಕ್ಷಾ ತಂಡ ಮತ್ತು ಮಾದರಿ ಸಮೀಕ್ಷೆ ಮತ್ತು ಮೌಲ್ಯ ಮಾಪನ ಘಟಕ ಬೆಂಗಳೂರು ಮತ್ತು ಮಾದರಿ ಸಮೀಕ್ಷೆ ಮತ್ತು ಮೌಲ್ಯ ಮಾಪನ ಘಟಕ, ಮೈಸೂರು, ಧಾರವಾಡ, ಗುಲ್ಬರ್ಗಾ, ಇವುಗಳು ರಾಜ್ಯದಲ್ಲಿ ಕುಷ್ಠ ರೋಗ ಸಾಂಕ್ರಾಮಿಕ ಸಮೀಕ್ಷೆಯನ್ನು ಡೆಸಿ ರುತ್ತವೆ.

ಈ ಘಟಕಗಳು ಮಾದರಿ ಸಮೀಕ್ಷೆ ಮತ್ತು ಮೌಲ್ಯಮಾಪನ ಕಾರ್ಯವನ್ನು ಚಿತ್ರದುರ್ಗ, ರಾಯಚೂರು, ಧಾರವಾಡ, ಬೆಳಗಾಂ, ಮೈಸೂರು, ದಕ್ಷಿಣ ಕನ್ನಡ, ಗುಲ್ಬರ್ಗಾ, ಬಿಜಾಪುರ, ಮತ್ತು ಉತ್ತರ ಕನ್ನಡ ಜಿಲ್ಲೆಗಳಲ್ಲಿ ನಡೆಸಲಾಯಿತು ಮತ್ತು ರೋಗದ ಸೋಂಕು ಇರುವಿಕೆಯನ್ನು ಮೌಲ್ಯ ಮಾಪನ ಮಾಡಲಾಯಿತು.

ಈ ಘಟಕಗಳು ತಮ್ಮ ಪ್ರವಾಸ ಕಾಲದಲ್ಲಿ ಕುಷ್ಠರೋಗದ ಆರಂಭದ ಹಂತದಲ್ಲಿಯೇ ಪತ್ತೆ ಹಚ್ಚುವ ಮತ್ತು ಆರೋಗ್ಯ ಶಿಕ್ಷಣವನ್ನು ಉಪಾಧ್ಯಾಯರುಗಳಿಗೆ ಮತ್ತು ವಿದ್ಯಾರ್ಥಿಗಳಿಗೆ ನೀಡುವ ಸಲುವಾಗಿ ಶಾಲೆಗಳಿಗೆ ಭೇಟಿ ನೀಡಿದ್ದವು.

ಈ ಘಟಕಗಳು ಸಾಧಿಸಿದ ಪ್ರಗತಿ ಈ ರೀತಿ ಇದೆ :

| ಕ್ರಮ ಸಂಖ್ಯೆ | ವಿವರಗಳು | ಬೆಂಗಳೂರು | ಮೈಸೂರು | ಧಾರವಾಡ | ಗುಲ್ಬರ್ಗಾ |
|---|---|---|---|---|---|
| 1 | ಭೇಟಿ ಕೊಟ್ಟ ಒಟ್ಟು ಹಳ್ಳಿಗಳ ಸಂಖ್ಯೆ | 21 | 69 | 20 | 22 |
| 2 | ಸಮೀಕ್ಷೆ ನಡೆಸಿದ ಶಾಲೆಗಳ ಸಂಖ್ಯೆ | 14 | 19 | 9 | 9 |
| 3 | ಸಮೀಕ್ಷೆ ನಡೆಸಿದ ಜನ ಸಂಖ್ಯೆ | 10434 | 57300 | 32165 | 40403 |
| 4 | ಪರೀಕ್ಷೆ ಮಾಡಿದ ಜನ ಸಂಖ್ಯೆ | 8934 | 37830 | 24106 | 33353 |
| 5 | ಹೊಸ ರೋಗಿಗಳನ್ನು ಪತ್ತೆ ಹಚ್ಚಿದ ಸಂಖ್ಯೆ | 8 | 10 | 9 | 222 |
| 6 | ಚರ್ಮ ಲೇಪನ ತೆಗೆದ ಸಂಖ್ಯೆ | 13 | 21 | 38 | 283 |

## ರಾಷ್ಟ್ರೀಯ ಕ್ಷಯ ರೋಗ ನಿಯಂತ್ರಣ ಕಾರ್ಯಕ್ರಮ

ಸಾಮಾನ್ಯ ಆರೋಗ್ಯ ಸೇವೆಯಲ್ಲಿಯೇ ಕ್ಷಯರೋಗ ಕಾರ್ಯಕ್ರಮವನ್ನು ಸಂಯೋಜಿಸಲಾಗಿದೆ.

ರಾಜ್ಯ ಕ್ಷಯ ರೋಗ ಕೇಂದ್ರವು ಕ್ಷಯ ರೋಗ ಕಾರ್ಯಕ್ರಮವನ್ನು ಯೋಜಿಸುವುದು, ಕಾರ್ಯಗತಗೊಳಿಸುವುದು ಮತ್ತು ಕಾರ್ಯಕ್ರಮದ ಮೌಲ್ಯ ಮಾಪನವನ್ನು ನಡೆಸುತ್ತದೆ. ಈ ಕೇಂದ್ರದಲ್ಲಿ ಸೋಂಕು ಪರಿಶೀಲನಾ ವಿಭಾಗ, ಜೀವಾಣು ವಿಭಾಗ ಮತ್ತು ತರಬೇತಿ ವಿಭಾಗಗಳಿದ್ದು ಕಾರ್ಯ ನಿರ್ವಹಿಸುತ್ತಿವೆ.

ರಾಜ್ಯದಲ್ಲಿ ಎಲ್ಲಾ 20 ಜಿಲ್ಲೆಗಳಲ್ಲಿಯೂ ಕ್ಷಯ ರೋಗ ಕೇಂದ್ರಗಳು ಕಾರ್ಯ ನಿರ್ವಹಿಸುತ್ತಿವೆ.

ಕಾರ್ಯಕ್ರಮದ ಉದ್ದೇಶ ಮತ್ತು ಅದನ್ನು ಅಳವಡಿಸುವ ವಿಧಾನ :

1 ಸಾಮಾನ್ಯ ಆರೋಗ್ಯ ಸೇವೆಯಲ್ಲಿಯೇ ಕ್ಷಯರೋಗವನ್ನು ಪತ್ತೆ ಹಚ್ಚಲು ಬೇಕಾಗುವ ಅನುಕೂಲಗಳನ್ನು ಒದಗಿಸುವುದು.

2 ಕ್ಷಯರೋಗ ಇರುವ ರೋಗಿಗಳಿಗೆ ನಿವಾಸದ ಹತ್ತಿರದಲ್ಲಿ ಔಷಧೋಪಚಾರ ಮಾಡುವುದು.

3 ಈ ಮಾರಕ ರೋಗದ ಬಗ್ಗೆ ರೋಗಿಗಳಿಗೂ ಮತ್ತು ಸಾರ್ವಜನಿಕರಿಗೂ ಎಲ್ಲಾ ವಿಧವಾದ ಮಾಹಿತಿಯನ್ನು ಕೊಡುವುದು ಮತ್ತು ರೋಗಿಯು ಚಿಕಿತ್ಸೆಯನ್ನು ಪೂರ್ಣ ಅವಧಿ ತೆಗೆದುಕೊಳ್ಳಲು ತಿಳಿಸುವುದು.

4 ಕ್ಷಯ ರೋಗವನ್ನು ಪತ್ತೆಹಚ್ಚುವುದು- (ಕ್ಷ-ಕಿರಣ ಮತ್ತು ಕಫ ಪರೀಕ್ಷೆಯಿಂದ)

5 ಎದೆ ಗೂಡಿನ ಕಾಯಿಲೆ ಲಕ್ಷಣಗಳನ್ನು ಪತ್ತೆ ಹಚ್ಚುವುದು.

6 ಎದೆ ಗೂಡಿನ ಕಾಯಿಲೆ ಲಕ್ಷಣಗಳಿರುವವರನ್ನು ಕಫ ಪರೀಕ್ಷೆಗೆ ಒಳಪಡಿಸುವುದು.

## ರಾಜ್ಯದಲ್ಲಿ ಕ್ಷಯಂ ರೋಗ ಕಾರ್ಯಕ್ರಮದಡಿಯಲ್ಲಿ ಪೂರ್ವಭಾವಿ ವ್ಯವಸ್ಥೆಗಳು :

1 ಒಂದು ರಾಜ್ಯ ಕ್ಷಯರೋಗ ಕೇಂದ್ರ, ಬೆಂಗಳೂರು.

2 ಇಪ್ಪತ್ತು ಜಿಲ್ಲಾ ಕ್ಷಯರೋಗ ಕೇಂದ್ರಗಳು.

3 (ಅ) ಎರಡು ಹೆಚ್ಚುವರಿ ಕ್ಷಯರೋಗ ಕೇಂದ್ರಗಳು (ಸಿರ್ಸಿ, ಕಾರವಾರ ಜಿಲ್ಲೆ ಮತ್ತು ದಾವಣಗೆರೆ, ಚಿತ್ರದುರ್ಗ ಜಿಲ್ಲೆ)

(ಆ) ಮೂರು ಹೆಚ್ಚುವರಿ ಕ್ಷಯರೋಗ ಕೇಂದ್ರಗಳು 1992-93ರಲ್ಲಿ ಮಂಜೂರಾತಿ ಪಡೆದಿದು, ಇನ್ನೂ ಕಾರ್ಯನಿರ್ವಹಿಸಬೇಕಾಗಿದೆ (ತುಮಕೂರು ಜಿಲ್ಲೆಯ ಶಿರಾ, ಬಳ್ಳಾರಿ ಜಿಲ್ಲೆಯ ಹೊಸಪೇಟೆ ಮತ್ತು ರಾಯಚೂರು ಜಿಲ್ಲೆಯ ಕೊಪ್ಪಳ).

4 ಹತ್ತು ಸರ್ಕಾರಿ ಕ್ಷಯ ರೋಗ ಮತ್ತು ಎದೆ ಗೂಡಿನ ಕಾಯಿಲೆ ಆಸ್ಪತ್ರೆಗಳು.

5 ಒಂದು ನೂರ ಐವತ್ತು ಕ್ಷ-ಕಿರಣ ಕೇಂದ್ರಗಳು.

6 ಆರುನೂರ ತೊಂಬತ್ತು ಸೂಕ್ಷ್ಮದರ್ಶಕ ಕೇಂದ್ರಗಳು.

7 ಒಂದು ಸಾವಿರದ ಇಪ್ಪತ್ತಮೂರು ಪರಾಮರ್ಶಕ ಕೇಂದ್ರಗಳು.

8 ಒಂದು ಅನುಪಾಲನಾ ಮತ್ತು ಪುನರ್ವಸತಿ ತರಬೇತಿ ಕೇಂದ್ರ, ಬೆಂಗಳೂರು.

9 ಮೂರು ಸಾವಿರದ ಐದುನೂರ ನಲವತ್ತೈದು ಕ್ಷಯ ರೋಗಿಗಳ ಹಾಸಿಗೆಗಳು (ಸರ್ಕಾರಿ ಮತ್ತು ಸ್ವಯಂ ಸೇವಾ ಸಂಸ್ಥೆಗಳಲ್ಲಿ)

ಕಡಿಮೆ ಅವಧಿಯ ಕಿಮೋಥೆರಪಿ ಚಿಕಿತ್ಸೆಯನ್ನು ವಿಕೇಂದ್ರೀಕರಣಗೊಳಿಸಿ ರಾಜ್ಯದ ಎಲ್ಲ ಜಿಲ್ಲೆಗಳಲ್ಲೂ ಒದಗಿಸಲಾಗಿದೆ. ರಾಜ್ಯ ಕ್ಷಯರೋಗ ಕೇಂದ್ರವು ಕ್ಷಯರೋಗ ನಿರ್ವಹಣೆ ಮತ್ತು ಜಿಲ್ಲಾ ಕ್ಷಯರೋಗ ಕಾರ್ಯಕ್ರಮದ ಹೊಸ ನೀತಿಗಳನ್ನು ತಿಳಿಸುವ ಸಲುವಾಗಿ ರಾಜ್ಯದ ಬೇರೆಬೇರೆ ಭಾಗಗಳಲ್ಲಿ ಪುನರ್ಮನನ ತರಬೇತಿ, ವಿಚಾರ ಸಂಕಿರಣ ಮತ್ತು ಕಾರ್ಯಾಗಾರಗಳನ್ನು ಏರ್ಪಡಿಸುತ್ತದೆ.

1992-93ನೇ ವರ್ಷದ ಗುರಿ ಮತ್ತು ಸಾಧನೆ (ನವೆಂಬರ್ 92ರ ಅಂತ್ಯದವರೆಗೆ)

| | ಗುರಿ | ಸಾಧನೆ | ಶೇಕಡವಾರು |
|---|---|---|---|
| 1 ಹೊಸ ರೋಗಿಗಳನ್ನು ಪತ್ತೆ ಹಚ್ಚುವುದು | 85,200 | 45,860 | 53.8 |
| 2 ಕಫ ಪರೀಕ್ಷೆ | 1,85,000 | 1,18,490 | 64.0 |

ನಿರೀಕ್ಷಿತ ಸಾಧನೆ (ಡಿಸೆಂಬರ್ 92 ರಿಂದ ಮಾರ್ಚ್ 93ರ ಅಂತ್ಯದವರೆಗೆ)

| | | |
|---|---|---|
| 1 ಹೊಸ ರೋಗಿಗಳನ್ನು ಪತ್ತೆ ಹಚ್ಚುವುದು | ... | 39,340 |
| 2 ಕಫ ಪರೀಕ್ಷೆ | ... | 66,510 |

ರಾಜ್ಯ ಕ್ಷಯರೋಗ ಕೇಂದ್ರದಲ್ಲಿ ತರಬೇತಿ ಪಡೆದವರ ಸಂಖ್ಯೆ :—

| | | | |
|---|---|---|---|
| 1 | ವೈದ್ಯಾಧಿಕಾರಿಗಳು | ... | 20 |
| 2 | ಆರೋಗ್ಯ ಮತ್ತು ಕು. ಕ. ತರಬೇತಿ ಕೇಂದ್ರ ಸೇವೆಯಲ್ಲಿರುವ ವೈದ್ಯಾಧಿಕಾರಿಗಳ ಸಂಖ್ಯೆ | ... | 12 |
| 3 | ಹೌಸ್ ಸರ್ಜನ್‌ಗಳು | ... | 317 |
| 4 | ಆರೋಗ್ಯ ಸಹಾಯಕರುಗಳು | ... | 64 |
| 5 | ಫಾರ್ಮಸಿಸ್ಟ್ | ... | 7 |
| 6 | ವೈದ್ಯಕೀಯ ವಿದ್ಯಾರ್ಥಿಗಳು | ... | 70 |
| 7 | ಹೆಚ್.ಎ.ಎಲ್. ನಿಂದ ಬಿಸಿಜಿ ತರಬೇತಿಗಾಗಿ ಬಂದ ವೈದ್ಯಾಧಿಕಾರಿಗಳು | ... | 1 |
| 8 | ಮಾರ್ಥಾನ್ ಆಸ್ಪತ್ರೆಯಿಂದ ತರಬೇತಿಗಾಗಿ ಬಂದ ನರ್ಸಿಂಗ್ ವಿದ್ಯಾರ್ಥಿಗಳು | ... | 36 |

ರಾಷ್ಟ್ರೀಯ ಅಂಧತ್ವ ನಿಯಂತ್ರಣ ಕಾರ್ಯಕ್ರಮ :—

ರಾಷ್ಟ್ರೀಯ ಅಂಧತ್ವ ನಿಯಂತ್ರಣ ಕಾರ್ಯಕ್ರಮವನ್ನು ಶೇಕಡಾ 100 ರಷ್ಟು ಕೇಂದ್ರ ಸರ್ಕಾರದ ಧನ ಸಹಾಯದಿಂದ ಕೆಲವೊಂದು ಅಂಶಗಳನ್ನು ಕಾರ್ಯಗತಗೊಳಿಸಲಾಗುತ್ತಿದೆ.

ಈ ಕಾರ್ಯಕ್ರಮದ ಉದ್ದೇಶವು ಕ್ರಿ. ಶ. 2000ದ ವೇಳೆಗೆ ಕರ್ನಾಟಕ ರಾಜ್ಯದಲ್ಲಿ ಪ್ರಸ್ತುತ ಶೇಕಡಾ 1,4ರಷ್ಟು ಇರುವ ಅಂಧತ್ವವನ್ನು ಶೇಕಡಾ 0.3ಕ್ಕೆ ಇಳಿಸುವುದಾಗಿರುತ್ತದೆ.

ರಾಷ್ಟ್ರೀಯ ಅಂಧತ್ವ ನಿಯಂತ್ರಣ ಕಾರ್ಯಕ್ರಮವನ್ನು ರಾಜ್ಯದಲ್ಲಿ ಕಾರ್ಯಗತಗೊಳಿಸಲು ಈ ಕೆಳಕಂಡ ಪೂರ್ವಭಾವಿ ವ್ಯವಸ್ಥೆಯನ್ನು ರಚಿಸಲಾಗಿದೆ.

1 ಕಾರ್ಯಕ್ರಮವನ್ನು ಯೋಜಿಸಲು ಕಾರ್ಯಕ್ರಮದ ಪ್ರಗತಿಯನ್ನು ಪರಿಶೀಲಿಸಲು ಮತ್ತು ಕಾರ್ಯಕ್ರಮದ ಮೌಲ್ಯಮಾಪನ ನಡೆಸಲು ರಾಜ್ಯ ಮಟ್ಟದ ನೇತ್ರ ಚಿಕಿತ್ಸಾ ಘಟಕವನ್ನು ಸೃಷ್ಟಿಸಲಾಗಿದೆ.

2 ಆಧುನಿಕ ತಂತ್ರಜ್ಞಾನದ ನೇತ್ರ ಚಿಕಿತ್ಸೆಯನ್ನು ಜನಸಮುದಾಯಕ್ಕೆ ಒದಗಿಸಲು ಬೆಂಗಳೂರಿನಲ್ಲಿರುವ ಮಿಂಟೋ ಕಣ್ಣಾಸ್ಪತ್ರೆಯನ್ನು ಪ್ರಾದೇಶಿಕ ನೇತ್ರ ಚಿಕಿತ್ಸಾ ಸಂಸ್ಥೆ ಎಂದು 1983 ರಲ್ಲಿ ಮೇಲ್ದರ್ಜೆಗೇರಿಸಲಾಯಿತು. ಈ ಸಂಸ್ಥೆಯು ಆಧುನಿಕ ಉಪಕರಣಗಳನ್ನು ಮತ್ತು ನುರಿತ ನೇತ್ರ ಶಸ್ತ್ರಚಿಕಿತ್ಸಕರನ್ನು ಹೊಂದಿರುತ್ತದೆ.

3 ಜನಸಮುದಾಯಕ್ಕೆ ಉನ್ನತಮಟ್ಟದ ನೇತ್ರ ಚಿಕಿತ್ಸೆ ನೀಡಲು 3 ವೈದ್ಯಕೀಯ ಮಹಾ ವಿದ್ಯಾಲಯಗಳಾದ.

ಅ) ಜೆ. ಜೆ. ಎಂ. ವೈದ್ಯಕೀಯ ಮಹಾವಿದ್ಯಾಲಯ, ದಾವಣಗೆರೆ.

ಆ) ಕರ್ನಾಟಕ ವೈದ್ಯಕೀಯ ಮಹಾವಿದ್ಯಾಲಯ, ಹುಬ್ಬಳ್ಳಿ.

ಇ) ಜವಹರಲಾಲ್ ನೆಹರು ಸ್ಮಾರಕ ವೈದ್ಯಕೀಯ ಮಹವಿದ್ಯಾಲಯ ಬೆಳಗಾವಿಯಲ್ಲಿರುವ ನೇತ್ರ ಚಿಕಿತ್ಸಾವಿಭಾಗವನ್ನು ಮೇಲ್ದರ್ಜೆಗೇರಿಸಲಾಯಿತು.

4 ಗ್ರಾಮೀಣ ಜನರಿಗೆ ನೇತ್ರ ಚಿಕಿತ್ಸಾ ಸೌಲಭ್ಯಗಳನ್ನು ಒದಗಿಸಲು ಈ ಯೋಜನೆಯಲ್ಲಿ 18 ಜಿಲ್ಲಾ ಆಸ್ಪತ್ರೆಗಳನ್ನು ಅಭಿವೃದ್ಧಿಗೊಳಿಸಲಾಗಿದೆ. ಪ್ರತಿ ಜಿಲ್ಲಾ ಆಸ್ಪತ್ರೆಗಳಲ್ಲಿ ನುರಿತ ನೇತ್ರ ಶಸ್ತ್ರ ಚಿಕಿತ್ಸಕರು ಅವರ ಸಹಾಯಕರೊಂದಿಗೆ (ನೇತ್ರ ಸಹಾಯಕರು) ಕೆಲಸ ನಿರ್ವಹಿಸುತ್ತಿದ್ದಾರೆ.

5 ಗ್ರಾಮೀಣ ಜನತೆಗೆ ನೇತ್ರ ಚಿಕಿತ್ಸೆಯ ಸೇವೆಯನ್ನು ಒದಗಿಸುವ ಸಲುವಾಗಿ ನಾಲ್ಕು ಕಂದಾಯ ವಿಭಾಗಗಳಾದ ಬೆಂಗಳೂರು, ಮೈಸೂರು, ಬೆಳಗಾವಿ ಮತ್ತು ಗುಲ್ಬರ್ಗಾಗಳಲ್ಲಿ 4 ಸಂಚಾರಿ ನೇತ್ರ ಚಿಕಿತ್ಸಾ ಘಟಕಗಳು ಗ್ರಾಮೀಣ ಪ್ರದೇಶಗಳಲ್ಲಿನ ಜನರಿಗೆ ನೇತ್ರ ಚಿಕಿತ್ಸೆ ನೀಡಲು ಮತ್ತು ಅಂಧತ್ವ ನಿರ್ಮೂಲನಾ ಕಾರ್ಯವನ್ನು ನಿರ್ವಹಿಸಲು ನಿಯಮಿತವಾಗಿ ನೇತ್ರ ಚಿಕಿತ್ಸಾ ಶಿಬಿರವನ್ನು ಏರ್ಪಡಿಸುತ್ತವೆ.

6 ಗ್ರಾಮೀಣ ಜನರಿಗೆ ರೋಗ ನಿರೋಧಕ ಮತ್ತು ವೈದ್ಯಕೀಯ ಪರಿಹಾರ ಚಿಕಿತ್ಸೆಯನ್ನು ಒದಗಿಸಲು ರಾಜ್ಯದ 6 ಜಿಲ್ಲೆಗಳಾದ ಚಿತ್ರದುರ್ಗ ಜಿಲ್ಲೆಯ ದಾವಣಗೆರೆ, ಚಿಕ್ಕಮಂಗಳೂರು, ವಿಜಾಪುರ ರಾಯಚೂರು, ಕಾರವಾರ ಮತ್ತು ತುಮಕೂರುಗಳಲ್ಲಿ ಸಂಚಾರಿ ನೇತ್ರ ಚಿಕಿತ್ಸಾ ಘಟಕಗಳು ಕೆಲಸ ನಿರ್ವಹಿಸುತ್ತಿವೆ. ಈ ಮೇಲ್ಕಂಡ ಸಂಚಾರಿ ನೇತ್ರ ಚಿಕಿತ್ಸಾ ಘಟಕಗಳ ಜೊತೆಗೆ ಕೇಂದ್ರ ಸರ್ಕಾರದ ಘಟಕಗಳೂ ಸಹ ಈ ಕಾರ್ಯಕ್ರಮದಲ್ಲಿ ಭಾಗವಹಿಸುತ್ತಿವೆ.

7 ಗ್ರಾಮೀಣ ಪ್ರದೇಶಗಳಲ್ಲಿನ ಜನರಿಗೆ ನೇತ್ರ ಚಿಕಿತ್ಸಾ ಸೇವೆಗಳನು ಒದಗಿಸಲು 291 ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಪ್ರತಿ ಆರೋಗ್ಯ ಕೇಂದ್ರದಲ್ಲಿ ಒಂದು ಅಪ್ತಾಲ್ಮಿಕ್ ಅಸಿಸ್ಟೆಂಟ್/ ರಿಫ್ರಾಕ್ಷನಿಸ್ಟ್ ಹುದ್ದೆಗಳನ್ನು ಒದಗಿಸಲಾಗಿದೆ.

8 ಮಿಂಟೋ ಕಣ್ಣಾಸ್ಪತ್ರೆ, ಬೆಂಗಳೂರು, ಕೃಷ್ಣರಾಜೇಂದ್ರ ಆಸ್ಪತ್ರೆ, ಮೈಸೂರು ಮತ್ತು ಜವಾಹರಲಾಲ್ ನೆಹರು ವೈದ್ಯಕೀಯ ಮಹಾವಿದ್ಯಾಲಯ, ಬೆಳಗಾವಿಗಳಲ್ಲಿ ಮೂರು ನೇತ್ರ ಬ್ಯಾಂಕ್‌ಗಳು ಕಾರ್ಯ ನಿರ್ವಹಿಸುತ್ತಿವೆ. ಈ ನೇತ್ರ ಬ್ಯಾಂಕ್‌ಗಳು ಕಣ್ಣುಗಳನ್ನು ಶೇಖರಿಸಿ ಅವಶ್ಯಕತೆ ಇದ್ದವರಿಗೆ ದೃಷ್ಟಿಯನ್ನು ಒದಗಿಸಲು ಕಣ್ಣು ಬದಲಾವಣೆಗಳನ್ನು ಮಾಡುತ್ತಿರುತ್ತವೆ.

ರಾಷ್ಟ್ರೀಯ ಅಂಧತ್ವ ನಿಯಂತ್ರಣ ಕಾರ್ಯಕ್ರಮದಡಿಯಲ್ಲಿ 1992-93ನೇ ಸಾಲಿನ ಗುರಿ ಮತ್ತು ಸಾಧನೆ (ನವೆಂಬರ್ 1992ರ ಅಂತ್ಯದವರೆಗೆ)

| | ಗುರಿ | ಸಾಧನೆ | ಶೇಕಡಾವಾರು |
|---|---|---|---|
| 1992–93 | 90,000 | 44,000 | 48.9 |
| ಡಿಸೆಂಬರ್ 92 ರಿಂದ ಮಾರ್ಚ್ 93ರ ಅಂತ್ಯದವರೆಗಿನ ನಿರೀಕ್ಷಿತ ಸಾಧನೆ | | 46,000 | |

## 1992-93ರಲ್ಲಿ ರಾಷ್ಟ್ರೀಯ ಅಂಧತ್ವ ನಿವಾರಣಾ ಕಾರ್ಯಕ್ರಮದ ಮುಖ್ಯ ಸಾಧನೆ

ಡಾನಿಡಾ ಯೋಜನೆಯ (ಎರಡನೇ ಹಂತ) ಸಹಾಯದಿಂದ ರಾಷ್ಟ್ರೀಯ ಅಂಧತ್ವ ನಿವಾರಣಾ ಕಾರ್ಯಕ್ರಮದಡಿಯಲ್ಲಿ ಪ್ರಾಯೋಗಿಕ ಯೋಜನೆಯನ್ನು (ಪೈಲೆಟ್ ಪ್ರಾಜೆಕ್ಟ್) ಕೈಗೊಳ್ಳಲು ಹಾಲಿ ಇರುವ ಪೂರ್ವಭಾವಿ ವ್ಯವಸ್ಥೆಯೊಂದಿಗೆ ತುಮಕೂರು ಜಿಲ್ಲೆಯನ್ನು ಆರಿಸಲಾಗಿದೆ. ಡಾನಿಡಾ ಸಂಸ್ಥೆಯು ಈ ಯೋಜನೆ ಕಾರ್ಯಗತಗೊಳಿಸಲು ಸಧ್ಯ ಲಭ್ಯವಿರುವ ಸೌಲಭ್ಯಗಳೊಂದಿಗೆ ಹೆಚ್ಚಿನ ಸೌಲಭ್ಯಗಳಾದ ಸಾಮಗ್ರಿಗಳು, ಸಾಮಗ್ರಿಗಳ ದುರಸ್ತಿ ಮತ್ತು ನಿರ್ವಹಣೆಗನ್ನೊಳಗೊಂಡಂತೆ ಉಪಕರಣಗಳನ್ನು ಒದಗಿಸುವುದು, ತರಬೇತಿ ಕಾರ್ಯಕ್ರಮ, ಕಾರ್ಯಾಗಾರಗಳು ಮತ್ತು ಸಂಶೋಧನೆಗಳು (ವೇತನ ಹೊರತುಪಡಿಸಿ) ಇತ್ಯಾದಿಗಳನ್ನು ಒದಗಿಸಲು ಉದ್ದೇಶಿಸಿದೆ. 1990ನೇ ಸಾಲಿನಿಂದ ನಾಲ್ಕು ವರ್ಷಗಳ ಅವಧಿಗೆ ಈ ಯೋಜನೆಗೆ ಪ್ರತಿ ವರ್ಷವೂ ರೂ. 20.00 ಲಕ್ಷಗಳ ಧನಸಹಾಯವನ್ನು ಭಾರತ ಸರ್ಕಾರದ ಮೂಲಕ ಡಾನಿಡಾ ಸಂಸ್ಥೆಯು ಒದಗಿಸುತ್ತದೆ.

ಡಾನಿಡಾ ಯೋಜನೆಯನ್ನು 1992–93ರಲ್ಲಿ ಮುಂದುವರಿಸಲಾಗಿದೆ. ಭಾರತ ಸರ್ಕಾರವು ಈ ಯೋಜನೆಗೆ ಈ ವರ್ಷವೂ 16.00 ಲಕ್ಷ ರೂಪಾಯಿಗಳನ್ನು ಒದಗಿಸಿದೆ.

## ರಾಷ್ಟ್ರೀಯ ಮಲೇರಿಯಾ ನಿರ್ಮೂಲನಾ ಕಾರ್ಯಕ್ರಮ.--

ಮಲೇರಿಯಾ ನಿರ್ಮೂಲನಾ ಕಾರ್ಯಕ್ರಮವು ಕೇಂದ್ರ ಸರ್ಕಾರದಿಂದ ಪ್ರಾಯೋಜಿಸಲ್ಪಟ್ಟಿದ್ದು, ಕೆಲವು ಅಂಶಗಳಿಗೆ ರಾಜ್ಯ ಹಾಗೂ ಕೇಂದ್ರ ಸರ್ಕಾರಗಳು 50:50 ರಂತೆ ವೆಚ್ಚವನ್ನು ಭರಿಸಲಾಗುತ್ತಿದೆ. ಭಾರತ ಸರ್ಕಾರದ ಮಾರ್ಗದರ್ಶನದಂತೆ ಈ ಕಾರ್ಯಕ್ರಮವನ್ನು ರಾಜ್ಯದಲ್ಲಿ ಜಾರಿಗೊಳಿಸಲಾಗುತ್ತಿದೆ.

ಸಕ್ರಿಯಾ ಹಾಗೂ ಸ್ಥಿತ ರಕ್ತಲೇಪನಗಳ ಸಮೀಕ್ಷೆಯನ್ನು ರಾಜ್ಯದಲ್ಲಿ ಚುರುಕುಗೊಳಿಸಲಾಗಿದೆ. ಪುರುಷ ಹಾಗೂ ಮಹಿಳಾ ಕಾರ್ಯಕರ್ತರಿಗೆ ನಿಗಾಪನಾ ಕಾರ್ಯವನ್ನು ವಹಿಸಲಾಗಿದೆ. ಪ್ರಯೋಗ ಶಾಲೆಯ ಸೇವೆಗಳನ್ನು ಕ್ರಮಬದ್ಧಗೊಳಿಸಲಾಗಿದೆ. ಮತ್ತು ಆರೋಗ್ಯ ಕೇಂದ್ರದ ಸೂಕ್ಷ್ಮದರ್ಶಕ ತರಬೇತಿ ಹೊಂದಿದ ಆರೋಗ್ಯ ಕಾರ್ಯಕರ್ತರ ಸೇವೆಯನ್ನು ಉಪಯೋಗಿಸಿಕೊಂಡು ಪರೀಕ್ಷೆಯಾಗದೆ ಉಳಿದಿದ್ದ ರಕ್ತಲೇಪನಗಳನ್ನು ಶೀಘ್ರವಾಗಿ ಪರೀಕ್ಷಿಸಲಾಗಿದೆ. ಪುರುಷ ಮತ್ತು ಮಹಿಳಾ ಆರೋಗ್ಯ ಕರ್ತರುಗಳು ಮಲೇರಿಯಾ ಪ್ರಕರಣಗಳಿಗೆ ತೀವ್ರ ಚಿಕಿತ್ಸೆಯನ್ನು ಒದಗಿಸುತ್ತಾರೆ. ಪ್ರತಿ ತಿಂಗಳೂ ಪ್ರಾಥಮಿಕ ಆರೋಗ್ಯ ಕೇಂದ್ರದ ಹಂತದಲ್ಲಿ ಕಾರ್ಯಕ್ರಮದ ಅಭಿವೃದ್ಧಿಯನ್ನು ಪರಿಶೀಲಿಸಿ ಸಮಸ್ಯಾತ್ಮಕ ಪ್ರದೇಶಗಳನ್ನು ಗುರ್ತಿಸಿ ಮಲೇರಿಯಾ ನಿಯಂತ್ರಣಕ್ಕೆ ಸೂಕ್ತವಾದ ಮಾರ್ಗದರ್ಶನವನ್ನು ನೀಡಲಾಗುತ್ತಿದೆ.

## ರಾಷ್ಟ್ರೀಯ ಮಲೇರಿಯಾ ನಿರ್ಮೂಲನಾ ಕಾರ್ಯಕ್ರಮದ ಉದ್ದೇಶಗಳು.—

ಮಲೇರಿಯಾದಿಂದ ಸಂಭವಿಸಬಹುದಾದ ಮರಣವನ್ನು ತಡೆಗಟ್ಟುವುದು ಹಾಗೂ ಮಲೇರಿಯಾ ಪ್ರಕರಣಗಳನ್ನು ಸಾರ್ವಜನಿಕ ಆರೋಗ್ಯ ಧಕ್ಕೆಯಾಗದಷ್ಟು ಪ್ರಮಾಣಕ್ಕೆ ಇಳಿಸುವುದು ಈ ಕಾರ್ಯಕ್ರಮದ ಮುಖ್ಯ ಉದ್ದೇಶವಾಗಿದೆ.

ಸೂಕ್ಷ್ಮದರ್ಶಕ ಯಂತ್ರದಿಂದ ಪತ್ತೆಯಾದ ಎಲ್ಲಾ ಮಲೇರಿಯಾ ರೋಗ ಪ್ರಕರಣಗಳನ್ನು ಕ್ಲೋರೋಕ್ವಿನ್ ಮತ್ತು ಪ್ರಿಮಾಕ್ವಿನ್ ಗುಳಿಗೆಗಳಿಂದ ತೀವ್ರ ಚಿಕಿತ್ಸೆ ನೀಡಲಾಗುತ್ತಿದೆ. ಪಿ–ವೈವಾಕ್ಸ್ ಹಾಗೂ ಮಿಶ್ರ ಮಲೇರಿಯಾ ಪ್ರಕರಣಗಳಿಗೆ ಪ್ರಿಮಾಕ್ವಿನ್‌ನೊಂದಿಗೆ ಐದು ದಿನಗಳ ಚಿಕಿತ್ಸೆಯನ್ನು ಪ್ರಥಮ ದಿನದ ಕ್ಲೋರೋಕ್ವಿನ್ ಗುಳಿಗೆಗಳ ಒಂದು ಪ್ರಮಾಣವನ್ನು ಸೇರಿಸಿ ನೀಡಲಾಗುವುದು. ಪಿ. ಎಫ್. ಮಲೇರಿಯಾ ಪ್ರಕರಣಗಳಿಗೆ ಕ್ಲೋರೋಕ್ವಿನ್ ಮತ್ತು ಪ್ರಿಮಾಕ್ವಿನ್ ಗುಳಿಗೆಗಳನ್ನೊಳಗೊಂಡಂತೆ ಒಂದು ದಿನದ ತೀವ್ರ ಚಿಕಿತ್ಸೆಯನ್ನು ನೀಡಲಾಗುತ್ತದೆ.

ಮಲೇರಿಯಾ ಹರಡುವಿಕೆಯನ್ನು ಪರಿಣಾಮಕಾರಿಯಾಗಿ ತಡೆಯಲು ಎರಡು ಸುತ್ತು ಡಿ.ಡಿ.ಟಿ. ಮತ್ತು ಮೂರು ಸುತ್ತು 25ರ ಶತಾಂಶ ಮೆಲಾಥಿಯನ್ ಕ್ರಿಮಿನಾಶಕವನ್ನು ಕಳೆದ ಮೂರು ವರ್ಷಗಳಿಂದ ವಾರ್ಷಿಕ ಪರಾವಲಂಬಿ ಸೂಚ್ಯಂಕ 2ಕ್ಕಿಂತ ಹೆಚ್ಚಿರುವ ಪ್ರದೇಶಗಳಲ್ಲಿ ಸಿಂಪಡಿಸಲಾಗುತ್ತಿದೆ. ಇದಲ್ಲದೆ, ಪ್ರಾಯೋಗಿಕವಾಗಿ "ಐಕಾನ್" ಹಾಗೂ "ಡೆಲ್ಟಾಮೆಥರಿನ್" ಎಂಬ ಕ್ರಿಮಿನಾಶಕವನ್ನು ಕೋಲಾರ ಜಿಲ್ಲೆಯ ಬಾಗೇಪಲ್ಲಿ, ತುಮಕೂರು ಜಿಲ್ಲೆಯ ಹುಳಿಯಾರು, ಗುಲ್ಬರ್ಗ ಜಿಲ್ಲೆಯ ಕೆಂಭಾವಿ, ಪ್ರಾಥಮಿಕ ಆರೋಗ್ಯ ಘಟಕ ಮತ್ತು ಪ್ರಾಥಮಿಕ ಆರೋಗ್ಯ ಕೇಂದ್ರ, ಪೆಟ್ಟಮ್ಮಾಪುರ ಹಾಗೂ ಬಿಜಾಪುರ ಜಿಲ್ಲೆಯ ಸಲತ್‌ವಾಡ್ ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಕ್ರಮವಾಗಿ ಸಿಂಪಡಿಸಲಾಗುತ್ತಿದೆ.

ಮಲೇರಿಯಾ ನಿಯಂತ್ರಣಕ್ಕಾಗಿ ಭಾರತ ಸರ್ಕಾರವು ಕರ್ನಾಟಕ ರಾಜ್ಯವನ್ನು ಆರಿಸಿ-ಮಲೇರಿಯಾಜನಿಕ್ ವಿಭಾಗೀಕರಣವನ್ನು ಮಾಡಿ ಇದರಲ್ಲಿ ಜೈವಿಕ ಪರಿಸರ ನಿಯಂತ್ರಣವನ್ನು ಅನುಷ್ಠಾನಗೊಳಿಸುವುದಕ್ಕೆ ಹೆಚ್ಚಿನ ಮಹತ್ವ ನೀಡಲಾಗಿದೆ.

ಸೂಕ್ತವಾದ ಪ್ರದೇಶಗಳಲ್ಲಿ ಜೈವಿಕ ಪರಿಸರ ನಿಯಂತ್ರಣ ಕಾರ್ಯವನ್ನು ಪರಿಣಾಮಕಾರಿಯಾಗಿ ಅನುಷ್ಠಾನಕ್ಕೆ ತರಲು ರಾಜ್ಯದ ಜಿಲ್ಲಾ ಮಲೇರಿಯಾ ಅಧಿಕಾರಿ ಹಾಗೂ ಸಿಬ್ಬಂಧಿಗೆ ವಿಸ್ತೃತ ತರಬೇತಿಯನ್ನು ನೀಡಲಾಗಿದೆ.

ರಾಜ್ಯದಲ್ಲಿ ಸುಮಾರು 6610 ಔಷಧಿ ವಿತರಣಾ ಕೇಂದ್ರಗಳನ್ನು ಮತ್ತು 3234 ಜ್ವರ ಚಿಕಿತ್ಸಾ ಶಿಬಿರಗಳನ್ನು ಬೇರೆ ಬೇರೆ ಸ್ವಯಂಸೇವಾ ಸಂಘಗಳ ಮೂಲಕ ಸಂಪರ್ಕವಿಲ್ಲದ ದೂರದ ಪ್ರದೇಶಗಳಲ್ಲಿ ಈಗಾಗಲೇ ಸ್ಥಾಪಿಸಲಾಗಿದೆ.

ಮಲೇರಿಯಾ ನಿಯಂತ್ರಣಕ್ಕೆ ಸಕ್ರಿಯ ಹಾಗೂ ಸ್ಥಿತ ನಿಗಾವಣಾ ಮಾಧ್ಯವರ್ತಿಗಳ ಮೂಲಕ ರೋಗ ಪತ್ತೆಹಚ್ಚುವ ಕಾರ್ಯವು ಬಹು ಮುಖ್ಯವಾದುದ್ದು. ಪುರುಷ ಮತ್ತು ಮಹಿಳಾ ಆರೋಗ್ಯ ಕಾರ್ಯಕರ್ತರು ಪಾಕ್ಷಿಕವಾಗಿ ಮನೆ ಮನೆಗೆ ಭೇಟಿ ನೀಡಿ ಜ್ವರ ಪೀಡಿತರಿಂದ ರಕ್ತಲೇಪನ ಸಂಗ್ರಹಿಸಿ ಕ್ಲೋರೋಕ್ವಿನ್ ಗುಳಿಗೆಗಳಿಂದ ಪೂರ್ವಭಾವಿ ಚಿಕಿತ್ಸೆಯನ್ನು ನೀಡುತ್ತಿದ್ದಾರೆ. ಸಕ್ರಿಯ ನಿಗಾವಣೆಯಲ್ಲಿ ಕನಿಷ್ಠ ಪಕ್ಷ ತಿಂಗಳಿಗೆ ಜನಸಂಖ್ಯೆಯ ಶೇಕಡಾ 1 ರಷ್ಟು ಜನರನ್ನು ರಕ್ತಪರೀಕ್ಷೆಗೆ ಒಳಪಡಿಸಿ ಸ್ಥಿತ ಸಮೀಕ್ಷೆಯಲ್ಲಿ ಎಲ್ಲಾ ಆರೋಗ್ಯ ಮತ್ತು ವೈದ್ಯಕೀಯ ಸಂಸ್ಥೆಗಳು ತಮ್ಮಲ್ಲಿಗೆ ಬರುವ ಎಲ್ಲಾ ಜ್ವರಪೀಡಿತ ಹೊರರೋಗಿಗಳಿಂದ ರಕ್ತಲೇಪನಗಳನ್ನು ಸಂಗ್ರಹಿಸಿ ಕ್ಲೋರೋಕ್ವಿನ್ ಗುಳಿಗೆಗಳಿಂದ ಪೂರ್ವಭಾವಿ ಚಿಕಿತ್ಸೆಯನ್ನು ನೀಡಲಾಗುವುದು. ಸ್ಥಿತ ರಕ್ತಲೇಪನ ಸಮೀಕ್ಷೆಯು ಪ್ರತಿ ತಿಂಗಳಿನ ಹೊಸ ಹೊರ ರೋಗಿಗಳ ಸಂಖ್ಯೆಯ ಶೇಕಡಾ 15ಕ್ಕೆ ಕಡಿಮೆ ಇಲ್ಲದಂತೆ ಇರತಕ್ಕದ್ದು: ಇದಲ್ಲದೆ ಸೂಕ್ಷ್ಮದರ್ಶಕ ಯಂತ್ರದ ಸೌಲಭ್ಯವಿರುವ ಎಲ್ಲಾ ಆರೋಗ್ಯ ಮತ್ತು ವೈದ್ಯಕೀಯ ಸಂಸ್ಥೆಗಳಲ್ಲಿ ಮಲೇರಿಯಾ ಔಷಧಾಲಯವನ್ನು ನಡೆಸಲಾಗುತ್ತಿದೆ.

1992–93ನೇ ಸಾಲಿಗೆ ರಕ್ತಲೇಪನ ಪರೀಕ್ಷೆಯ ನಿಗದಿತ ಗುರಿಯು 49,92,960 ಇದ್ದು, ಇದರಲ್ಲಿ ಅಕ್ಟೋಬರ್ 92ರ ಅಂತ್ಯದವರೆಗೆ 79,61,051 ರಕ್ತಲೇಪನಗಳನ್ನು ಪರಿಕ್ಷೀಸಲಾಗಿದೆ. ಸಾಮಾನ್ಯವಾಗಿ ಇರಬೇಕಾದ ವಾರ್ಷಿಕ 10ರ ಪ್ರಮಾಣಕ್ಕೆ ಬದಲಾಗಿ ಈ ಸಾಲಿನಲ್ಲಿ 15.9 ರಷ್ಟು ಸಾಧಿಸಲಾಗಿದೆ.

ಪ್ರಸಕ್ತ ಸಾಲಿನಲ್ಲಿ 24 675 ಪಿ.ಎಫ್. ಪ್ರಕರಣಗಳೂ ಸೇರಿದಂತೆ ಒಟ್ಟು 60671 ಮಲೇರಿಯಾ ಪ್ರಕರಣಗಳನ್ನು ರಾಜ್ಯದಲ್ಲಿ ಪತ್ತೆಹಚ್ಚಲಾಗಿದೆ. ರಕ್ತಲೇಪನ ಪರಾವಲಂಬಿ ಪ್ರಮಾಣ ಶೇಕಡಾ 1.2 ರಷ್ಟು ಹಾಗೂ ವಾರ್ಷಿಕ ಪರಾವಲಂಬಿ ಸೂಚ್ಯಂಕವು ಸಾವಿರಕ್ಕೆ 0.5 ರಷ್ಟು ಹೆಚ್ಚಳವಾಗಿದೆ. ತೀವ್ರವಾದ ನಿಗಾವಣಾ ಕಾರ್ಯದಿಂದ ಹುದುಗಿದ್ದ ಮಲೇರಿಯಾ ಪ್ರಕರಣಗಳನ್ನು ಪತ್ತೆಹಚ್ಚಿದ್ದರಿಂದ, ಈ ಹೆಚ್ಚಳಕ್ಕೆ ಕಾರಣವಾಗಿರುತ್ತದೆ. 60,671 ಮಲೇರಿಯಾ ಪ್ರಕರಣಗಳಲ್ಲಿ ಶೇಕಡಾ 88.6 ರಷ್ಟು ಪ್ರಕರಣಗಳಿಗೆ ತೀವ್ರ ಚಿಕಿತ್ಸೆ ನೀಡಲಾಗಿದೆ.

ಕೇಂದ್ರ ಮಲೇರಿಯಾ ಪ್ರಯೋಗಾಲಯ,—

ಪ್ರಯೋಗ ಶಾಲೆಗಳಲ್ಲಿ ರಕ್ತಲೇಪನ ಪರೀಕ್ಷೆ ಹಾಗೂ ನಿಖರವಾದ ಮಲೇರಿಯಾ ಪ್ರಕರಣ ಕಾರ್ಯದಲ್ಲಿ ಗುಣಮಟ್ಟವನ್ನು ಕಾಯ್ದುಡಲು ಕೇಂದ್ರ ಮಲೇರಿಯಾ ಪ್ರಯೋಗಾಲಯವು ಸತತವಾಗಿ ಮಾರ್ಗದರ್ಶಕ ಸೇವೆ ಸಲ್ಲಿಸುತ್ತಿದೆ. 1992ನೇ ಸಾಲಿನಲ್ಲಿ 124 ಆರೋಗ್ಯ ಕಾರ್ಯಕರ್ತರಿಗೆ ಸೂಕ್ಷ್ಮ ದರ್ಶಕ ತರಬೇತಿಯನ್ನು ನೀಡಲಾಗಿದೆ. ಇದೇ ವರ್ಷದಲ್ಲಿ 1·82,600 ರಕ್ತಲೇಪನಗಳನ್ನು ಮರುಪರೀಕ್ಷೆಗೆ ಒಳಪಡಿಸಿ ಅವುಗಳಲ್ಲಿ 166 ತಪ್ಪಿಹೋದ ಮಲೇರಿಯಾ ನಿಶ್ಚಿಯಾರ್ಥಕಗಳನ್ನು ಕಂಡು ಹಿಡಿಯಲಾಗಿದೆ. ಈಗಾಗಲೇ ಘೋಷಿಸಲ್ಪಟ್ಟ 14.523 ಮಲೇರಿಯಾ ಪ್ರಕರಣಗಳ ರಕ್ತಲೇಪನಗಳನ್ನು ಮರುಪರೀಕ್ಷೆಗೆ ಒಳಪಡಿಸಿ ಅವುಗಳಲ್ಲಿ 157 ರಕ್ತಲೇಪನಗಳು ನಿಷೇದಾರ್ಥಕಗಳೆಂದು ಕಂಡುಬಂದಿದೆ.

ಕೇಂದ್ರ ಮಲೇರಿಯಾ ಪ್ರಯೋಗಾಲಯದ ವತಿಯಿಂದ 62 ಸೂಕ್ಷ್ಮದರ್ಶಕ ಯಂತ್ರಗಳನ್ನು ದುರಸ್ತಿಗೊಳಿಸಲಾಗಿದೆ ಮತ್ತು 20 ತೈಲ ಮುಳುಗಡೆ ಮಸೂರಗಳನ್ನು ಶುದ್ಧೀಕರಿಸಿ ಮರು ಉಪಯೋಗಕ್ಕೆ ಅಳವಡಿಸಲಾಗಿದೆ. ಅಲ್ಲದೆ 39 ಹೊಸ ಮಸೂರಗಳನ್ನು ಬದಲಾಯಿಸಲಾಗಿದೆ.

ನಗರ ಮಲೇರಿಯಾ ಯೋಜನೆ.—

ಈ ಕೆಳಕಂಡ ಪಟ್ಟಣ ಮತ್ತು ನಗರಗಳಲ್ಲಿ ಈ ನಗರ ಮಲೇರಿಯಾ ಯೋಜನೆಯು ಕಾರ್ಯ ನಿರ್ವಹಿಸುತ್ತಿವೆ.

| | | |
|---|---|---|
| 1) ಬೆಂಗಳೂರು | 4) ಹೊಸಪೇಟೆ | 7) ತುಮಕೂರು |
| 2) ಬಳ್ಳಾರಿ | 5) ರಾಯಚೂರು | 8) ಚಿಕ್ಕಮಗಳೂರು |
| 3) ಬೆಳಗಾಂ | 6) ಹಾಸನ | |

ರೋಗವಾಹಕಗಳ ಸಾಂದ್ರತೆಯನ್ನು ಕಡಿಮೆಗೊಳಿಸಲು, ಸ್ಥಳೀಯ ಹರಡುವಿಕೆಯನ್ನು ತಡೆಗಟ್ಟಲು ವಾರಕ್ಕೊಮ್ಮೆ ಕೀಟನಾಶಕ ಸಿಂಪಡಿಣೆ ಲಾರ್ವಿವೋರಸ್ ಮೀನುಗಳ ಬಿಡುವಿಕೆ ಹಾಗೂ ಸೊಳ್ಳೆ ಉತ್ಪತ್ತಿಯ ಮೂಲಗಳ ನಾಶಗೊಳಿಸುಕೆ ಮುಂತಾದ ಕ್ರಮಗಳನ್ನುಕೈಗೊಳ್ಳಲಾಗುತ್ತಿದೆ. ಈ ಯೋಜನೆಯನ್ನು ಜಾರಿಗೊಳಿಸಿರುವ ಪ್ರದೇಶಗಳಲ್ಲಿ ಮಲೇರಿಯಾ ರೋಗ ಪ್ರಕರಣವು ಕಡಿಮೆಯಾಗಿದೆ.

## ರಾಷ್ಟ್ರೀಯ ಆನೆಕಾಲು ರೋಗ ನಿಯಂತ್ರಣ ಕಾರ್ಯಕ್ರಮ:

ಆನೆಕಾಲು ರೋಗವು ಒಂದು ಸಾಮಾಜಿಕ ಪಿಡುಗಾಗಿದ್ದು ದಕ್ಷಿಣ ಕನ್ನಡ, ಉತ್ತರ ಕನ್ನಡ, ಬೀದರ್, ಗುಲ್ಬರ್ಗಾ, ಬಿಜಾಪುರ ಮತ್ತು ರಾಯಚೂರು ಜಿಲ್ಲೆಗಳಲ್ಲಿ ಸ್ಥಾನಿಕವಾಗಿರುತ್ತದೆ.

ಈ ರೋಗವನ್ನು ನಿಯಂತ್ರಿಸಲು ಆಗಾಗ್ಗೆ ಆನೆಕಾಲು ರೋಗ ಸಮೀಕ್ಷೆಯನ್ನು ಕೈಗೊಂಡು ಆನೆಕಾಲು ರೋಗಾಣುಗಳನ್ನು ಹೊಂದಿರುವ ರೋಗಿಗಳನ್ನು ಪತ್ತೆಹಚ್ಚಿ ರೋಗಾಣುಗಳುಳ್ಳವರಿಗೆ ಚಿಕಿತ್ಸೆನೀಡಿ ಆ ಪ್ರದೇಶಗಳಲ್ಲಿ ಸೊಳ್ಳೆ ನಿಯಂತ್ರಣ ಕಾರ್ಯಗಳನ್ನು ಕೈಗೊಳ್ಳುವುದು ಈ ಕಾರ್ಯಕ್ರಮದ ಮುಖ್ಯ ಉದ್ದೇಶವಾಗಿದೆ.

ಈ ರೋಗವನ್ನು ಹತೋಟಿಯಲ್ಲಿಡಲು ಆರು ಆನೆಕಾಲು ನಿಯಂತ್ರಣ ಘಟಕಗಳು, ಹದಿನಾರು ಆನೆಕಾಲು ರೋಗ ಚಿಕಿತ್ಸಾಲಯಗಳು ಮತ್ತು ಒಂದು ಆನೆಕಾಲು ರೋಗ ಸಮೀಕ್ಷಾ ಘಟಕವು ರಾಜ್ಯದಲ್ಲಿ ಆನೆಕಾಲು ರೋಗದ ತೀವ್ರತೆಯಿರುವ ಈ ಕೆಳಕಂಡ ನಗರ ಪಟ್ಟಣಗಳಲ್ಲಿ ಕಾರ್ಯ ನಿರ್ವಹಿಸುತ್ತಿವೆ.

| ಪೈಲೇರಿಯಾ ನಿಯಂತ್ರಣ ಘಟಕಗಳು | ಫೈಲೇರಿಯಾ ಚಿಕಿತ್ಸಾಲಯಗಳು | ಆನೆಕಾಲು ರೋಗ ಸಮೀಕ್ಷಾ ಘಟಕ |
|---|---|---|
| 1 ಮಂಗಳೂರು (ದಕ್ಷಿಣ ಕನ್ನಡ) | 1 ಗುಲ್ಬರ್ಗ (ಗುಲ್ಬರ್ಗ) | ಆನೇಕಾಲು ರೋಗ ಸಮೀಕ್ಷಾ ಘಟಕ ರಾಯಚೂರು |
| 2 ಉಡುಪಿ ,, | 2 ಶೋರಾಪುರ ,, | |
| 3 ಗುಲ್ಬರ್ಗಾ (ಗುಲ್ಬರ್ಗಾ) | 3 ಸೇಡಂ ,, | |
| 4 ಶೊರಾಪುರ | 4 ಯಾದಗಿರ್ ,, | |
| 5 ಬೀದರ್ (ಬೀದರ್) | 5 ಶಹಾಪುರ ,, | |
| 6 ಗುಳೇದಗುಡ್ಡ (ಬಿಜಾಪುರ) | 6 ಶಹಾಬಾದ್ ,, | |
| | 7 ಚಿತ್ತಾಪುರ ,, | |
| | 8 ಆಳಂದ ,, | |
| | 9 ಬೀದರ್ (ಬೀದರ್) | |
| | 10 ಹುಮ್ನಾಬಾದ್ ,, | |
| | 11 ಬಸವಕಲ್ಯಾಣ ,, | |
| | 12 ಬಟ್ಕಳ (ಉತ್ತರ ಕನ್ನಡ) | |
| | 13 ಗೋಕರ್ಣ ,, | |
| | 14 ಮಂಗಳೂರು (ದಕ್ಷಿಣ ಕನ್ನಡ) | |
| | 15 ಉಡುಪಿ ,, | |
| | 16 ಗುಳೇದಗುಡ್ಡ (ಬಿಜಾಪುರ) | |

ಆನೇಕಾಲು ರೋಗ ನಿಯಂತ್ರಣ ಘಟಕಗಳು ವಾರದ ಅಂತರದಲ್ಲಿ ಸೊಳ್ಳೆ ನಿಯಂತ್ರಣ ಕಾರ್ಯಕ್ರಮಗಳನ್ನು ಕೈಗೊಂಡು ಖಾಯಿಲೆ ಹರಡುವ ಸೊಳ್ಳೆಗಳ ಸಾಂದ್ರತೆಯನ್ನು ಕಡಿಮೆ ಮಾಡುವುದಕ್ಕೆ ಕಾರ್ಯಕ್ರಮವನ್ನು ಕೈಗೊಳ್ಳುತ್ತವೆ.

ಆನೇಕಾಲು ಚಿಕಿತ್ಸಾಲಯಗಳನ್ನು ಮುಖ್ಯವಾಗಿ ರೋಗಾಣುಗಳಿರುವ ರೋಗಿಗಳ ಪತ್ತೆ ಹಾಗೂ ಚಿಕಿತ್ಸಾ ಕಾರ್ಯಗಳಲ್ಲಿ ತೊಡಗಿದ್ದು ಉಲ್ಬಣಗೊಂಡ ಪ್ರಕರಣಗಳಿಗೆ ಮತ್ತು ಇತರೆ ಎಲ್ಲಾ ಪ್ರಕರಣಗಳಿಗೆ ಡಿ. ಇ. ಸಿ. ಮಾತ್ರೆಗಳನ್ನು ವಿತರಿಸಿ ಜನಸಮುದಾಯದಲ್ಲಿ ರೋಗದ ಒತ್ತಡವನ್ನು ಕಡಿಮೆ ಮಾಡುತ್ತದೆ.

ರಾಯಚೂರಿನಲ್ಲಿರುವ ಆನೇಕಾಲು ರೋಗ ಸಮೀಕ್ಷಾ ಘಟಕವು ಆ ಜಿಲ್ಲೆಯಲ್ಲಿ ಆನೇಕಾಲು ರೋಗದ ಸಮೀಕ್ಷಾ ಕಾರ್ಯವನ್ನು ನಡೆಸುತ್ತದೆ.

## 1992–93ರಲ್ಲಿ ಕಾರ್ಯಕ್ರಮದ ಸಾಧನೆ

ಈ ರೋಗವನ್ನು ನಿಯಂತ್ರಿಸಲು 4 ಹೊಸ ಫೈಲೇರಿಯಾ ಚಿಕಿತ್ಸಾಲಯಗಳನ್ನು (1) ಉಳ್ಳಾಳ (ದಕ್ಷಿಣ ಕನ್ನಡ) (2) ಇಳಕಲ್ (ಬಿಜಾಪುರ) (3) ಚಿಂಚೋಳಿ (ಗುಲ್ಬರ್ಗಾ) ಮತ್ತು (4) ದೇವದುರ್ಗ (ರಾಯಚೂರು) ಪಟ್ಟಣಗಳಲ್ಲಿ ಸ್ಥಾಪಿಸಲು ಸರ್ಕಾರದ ಆದೇಶದ ಸಂಖ್ಯೆ ಹೆಚ್‌ಎಫ್‌ಡಬ್ಲ್ಯೂ 56 ಎಸ್ ಎಂ ಎಂ 91, ಬೆಂಗಳೂರು ದಿನಾಂಕ 31-3-92 ಮತ್ತು 29-7-92ರಲ್ಲಿ ಮಂಜೂರಾಗಿರುತ್ತದೆ. ಈ ಘಟಕಗಳನ್ನು ಸ್ಥಾಪಿಸಬೇಕಾಗಿದೆ.

### 1992–93 ಸಾಲಿನ ರಾಷ್ಟ್ರೀಯ ಆನೇಕಾಲು ರೋಗ ನಿಯಂತ್ರಣ ಕಾರ್ಯಕ್ರಮದ ಪ್ರಗತಿಯ ಸಾಧನೆ (ಜನವರಿ 92ರಿಂದ ನವೆಂಬರ್ 92ರ ಅಂತ್ಯದವರೆಗೆ)

| ತಪಾಸಣೆ ಮಾಡಿದ ಜನಸಂಖ್ಯೆ | ಮೈಕ್ರೋ ಫೈಲೇರಿಯಾ ರೋಗಾಣುವುಳ್ಳವರ ಸಂಖ್ಯೆ | ರೋಗದ ಬಾಹ್ಯ ಲಕ್ಷಣವುಳ್ಳವರ ಸಂಖ್ಯೆ | ಮೈಕ್ರೋ ಫೈಲೇರಿಯಾ ರೋಗದ ಪ್ರಮಾಣ (ಶೇಕಡಾವಾರು) | ರೋಗಲಕ್ಷಣವುಳ್ಳವರ ಪ್ರಮಾಣ (ಶೇಕಡಾವಾರು) |
|---|---|---|---|---|
| 109655 | 1556 | 2473 | 1.4 | 2.2 |

## ಅತಿಸಾರ ರೋಗ ಮತ್ತು ಸಾಂಕ್ರಾಮಿಕ ರೋಗ ನಿಯಂತ್ರಣ ಕಾರ್ಯಕ್ರಮ

### ಅತಿಸಾರರೋಗ ನಿಯಂತ್ರಣ ಕಾರ್ಯಕ್ರಮ :

ಕರ್ನಾಟಕ ರಾಜ್ಯದಲ್ಲಿ ಕಾಲರ, ಅತಿಸಾರ, ಕಾಮಾಲೆ ಮತ್ತು ಆಮಶಂಕೆ ಮುಂತಾದ ಖಾಯಿಲೆಗಳು ನೀರು ಮತ್ತು ಆಹಾರದ ಮೂಲಕ ಹರಡುವ ಖಾಯಿಲೆಗಳಾಗಿದ್ದು, ಇವು ಬಳ್ಳಾರಿ, ಬೀದರ್, ಗುಲ್ಬರ್ಗಾ, ಬೆಂಗಳೂರು ಗ್ರಾಮಾಂತರ ಹಾಸನ ಮತ್ತು ಮೈಸೂರು ಜಿಲ್ಲೆಗಳಲ್ಲಿ ಸ್ಥಾನಿಕವಾಗಿರುತ್ತದೆ.

ಗುಲ್ಬರ್ಗಾ, ಬಳ್ಳಾರಿ, ಬಿಜಾಪುರ, ಚಿತ್ರದುರ್ಗ ಮತ್ತು ಮೈಸೂರು ಜಿಲ್ಲೆಗಳಲ್ಲಿ ಕಾಲರ ನಿಯಂತ್ರಣ ತಂಡಗಳು ಕಾರ್ಯ ನಿರ್ವಹಿಸುತ್ತಿವೆ.

ಈ ರೋಗಗಳು ಕಾಣಿಸಿಕೊಂಡಾಗ ಚೆಲುವೆ ಪುಡಿಯಿಂದ ಕುಡಿಯುವ ನೀರಿನ ಮೂಲಗಳ ಶುದ್ಧೀಕರಣ, ಮನೆಗಳಿಗೆ ಕ್ರಿಮಿನಾಶಕ ಔಷಧಗಳ ಬಳಕೆ, ಕಾಲರ ಚುಚ್ಚುಮದ್ದು ನೀಡುವುದಲ್ಲದೆ ಮುಂತಾದ ರೋಗ ನಿರೋಧಕ ಕಾರ್ಯಕ್ರಮವನ್ನು ಈ ತಂಡಗಳು ಕೈಗೊಳ್ಳುತ್ತವೆ.

ಗ್ರಾಮೀಣ ಪ್ರದೇಶದಲ್ಲಿ ಕೊಳವೆ ಬಾವಿಗಳ ತೋಡುವಿಕೆಯಿಂದ ಪಟ್ಟಣ ಪ್ರದೇಶಗಳಲ್ಲಿ ಮುನಿಸಿಪಾಲಿಟಿ ಮತ್ತು ನಗರಸಭೆಯಿಂದ ಸುರಕ್ಷಿತ ಕುಡಿಯುವ ನೀರಿನ ಪೂರೈಕೆಯಿಂದ ನೀರಿನಿಂದ ಹರಡುವ ಖಾಯಿಲೆಗಳನ್ನು ಕಡಿಮೆ ಮಾಡಲಾಗಿದೆ.

1992ನೇ ಸಾಲಿನ ನವೆಂಬರ್ ಮತ್ತು ಡಿಸೆಂಬರ್ ತಿಂಗಳಲ್ಲಿ ಅಧಿಕ ಪ್ರಮಾಣದ ಪ್ರವಾಹದಿಂದ ಬಳ್ಳಾರಿ, ರಾಯಚೂರು, ಚಿತ್ರದುರ್ಗ ಮತ್ತು ಧಾರವಾಡ ಜಿಲ್ಲೆಗಳಲ್ಲಿ ತೀವ್ರ ಪ್ರಮಾಣದಲ್ಲಿ ಕರುಳುಬೇನೆ ಪ್ರಕರಣಗಳು ಕಾಣಿಸಿಕೊಂಡಿತ್ತು.

ಮುಂಜಾಗರೂಕತೆ ಕ್ರಮಗಳಾದ ಚಲುವೆಪುಡಿಯಿಂದ ಕಲುಷಿತ ನೀರನ್ನು ಶುದ್ಧೀಕರಿಸುವುದು, ಕಾಲರಾ ಮತ್ತು ಅತಿಸಾರ ರೋಗಿಗಳಿಗೆ ಚಿಕಿತ್ಸೆ ನೀಡುವುದು, ಕಾಲರಾ ವಿರುದ್ಧ ಚುಚ್ಚುಮದ್ದು ನೀಡುವುದು, ಬಾಯಿಮೂಲಕ ನೀಡುವ ಪುನರ್ಜಲೀಕರಣ ಲವಣದ ಪೊಟ್ಟಣಗಳ ಹಂಚಿಕೆ, ಮನೆಗಳಿಗೆ ಕ್ರಿಮಿನಾಶಕ ಸಿಂಪರಣೆ ಕಾರ್ಯಕ್ರಮವನು ಕೈಗೊಳ್ಳಲಾಗಿತ್ತು. ಆಕಾಶವಾಣಿ, ದೂರದರ್ಶನ, ಕರಪತ್ರ ಪೋಸ್ಟರ್ ಮೈಕ್ರೋಫೋನ್ ಮುಂತಾದವುಗಳ ಮೂಲಕ ಸಾರ್ವಜನಿಕರಿಗೆ ಆರೋಗ್ಯ ಶಿಕ್ಷಣ ನೀಡಲಾಯಿತು.

ಈ ಅತಿಸಾರ ರೋಗ ನಿಯಂತ್ರಣ ಕಾರ್ಯಕ್ರಮಕ್ಕೆ ರಾಜ್ಯ ಸರ್ಕಾರವು 10.00 ಲಕ್ಷ ರೂ. ಗಳನ್ನು ಔಷಧಿಗಾಗಿ ಮತ್ತು ಕ್ರಿಮಿನಾಶಕಗಳ ಖರೀದಿಗಾಗಿ ನಿಗದಿ ಪಡಿಸಿತ್ತು. ಇದರಲ್ಲಿ ದಿನಾಂಕ 30-11-92 ರವರೆಗೆ 5.00 ಲಕ್ಷ ರೂ. ಗಳನ್ನು ವೆಚ್ಚ ಮಾಡಲಾಗಿದೆ.

ಈ ಸಾಂಕ್ರಾಮಿಕ ರೋಗಗಳನ್ನು ತಡೆಗಟ್ಟಲು ಭಾರತ ಸರ್ಕಾರ ಧನಸಹಾಯ ನೀಡಿದೆ ಈ ಹಣದಲ್ಲಿ ತುರ್ತು ಔಷಧಿಗಳನ್ನು ಎಲ್ಲಾ ಪರಿಹಾರ ಶಿಬಿರಗಳಿಗೆ ಸರಬರಾಜು ಮಾಡಲಾಗಿದೆ.

1992ನೇ ಸಾಲಿನಲ್ಲಿ (ಜನವರಿ 92 ರಿಂದ ನವೆಂಬರ್ 1992ರವರೆಗೆ) ಕಾಲರಾ. ಕರಳುಬೇನೆ ಪ್ರಕರಣಗಳು.

| ಕರಳು ಬೇನೆ | | ಕಾಲರಾ | |
|---|---|---|---|
| ಪ್ರಕರಣಗಳು | ಮರಣಗಳು | ಪ್ರಕರಣಗಳು | ಮರಣಗಳು |
| 11942 | 486 | 359 | 12 |

ಕಾಮಾಲೆ:— ಕಾಮಾಲೆ ರೋಗವು ಅತಿಸಾರ ರೋಗಕ್ಕೆ ನೇರ ಸಂಬಂಧವಿರುವುದಿಲ್ಲ ಆದರೆ, ಇದ ನೀರು ಮತ್ತು ಆಹಾರದ ಮಲಿನತೆಯಿಂದ ಉಂಟಾಗುವ ಕಾಯಿಲೆಯಾಗಿರುತ್ತದೆ.

1992ರಲ್ಲಿ (ಜನವರಿ 92 ರಿಂದ ನವೆಂಬರ್ 92ರ ಅಂತ್ಯದವರೆಗೆ) ಕಾಮಾಲೆ ರೋಗದ ಪ್ರಕರಣ ಗಳು

| ಪ್ರಕರಣಗಳು | ಮರಣ |
|---|---|
| 265 | 9 |

ವಿಷಮ ಶೀತ ಜ್ವರ:

ವಿಷಮ ಶೀತ ಜ್ವರ ಸಾಂಕ್ರಾಮಿಕ ರೂಪದಲ್ಲಿ 1992ನೇ ಸಾಲಿನಲ್ಲಿ ಕೆಳಕಂಡ ಜಿಲ್ಲೆಗಳಲ್ಲಿ ಕಾಣಿಸಿ ಕೊಂಡಿರುತ್ತದೆ.

| ಸಂಖ್ಯೆ | ಜಿಲ್ಲೆಯ ಹೆಸರು | ಪ್ರಕರಣಗಳು | ಮರಣ |
|---|---|---|---|
| 1 | ಚಿಕ್ಕಮಂಗಳೂರು | 545 | 8 |
| 2 | ಹಾಸನ | 438 | 1 |
| 3 | ಕೊಡಗು | 178 | — |
| | ಒಟ್ಟು ಪ್ರಕರಣಗಳು | 1161 | 9 |

## ನಾರು ಹುಣ್ಣು ನಿರ್ಮೂಲನಾ ಕಾರ್ಯಕ್ರಮ:—

ಈ ಕಾರ್ಯಕ್ರಮವನ್ನು 1982ನೇ ಇಸವಿಯಲ್ಲಿ ಕೇಂದ್ರ ಸರ್ಕಾರದ ಪುರಸ್ಕೃತ ಯೋಜನೆಯು 50:50 ಹಂಚಿಕೆ ಸಮಾನೆಯಲ್ಲಿ ಪ್ರಾರಂಭಿಸಲಾಯಿತು. ಗುಲ್ಬರ್ಗಾ ಮತ್ತು ಬೆಳಗಾವಿ ವಿಭಾಗಕ್ಕೆ ಸೇರಿದ ಜಿಲ್ಲೆಗಳಾದ ಗುಲ್ಬರ್ಗಾ, ರಾಯಚೂರು ಬಿಜಾಪುರ ಜಿಲ್ಲೆಗಳಿಂದ ಈ ಪ್ರಕರಣಗಳು ವರದಿಯಾಗಿದೆ.

ಈ ಕಾರ್ಯಕ್ರಮದ ಮುಖ್ಯ ಉದ್ದೇಶಗಳು ಈ ಕೆಳಕಂಡಂತಿರುತ್ತದೆ.—

1 ಗ್ರಾಮಾಂತರ ಮಟ್ಟದಲ್ಲಿ ಶೂನ್ಯ ಪ್ರಕರಣವನ್ನು ಸಾಧಿಸಲು ಕಾರ್ಯಕ್ರಮವನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವುದು.

2 ರೋಗವಿರುವ ಗ್ರಾಮದಲ್ಲಿನ ಸುರಕ್ಷಿತವಾದ ಕುಡಿಯುವ ನೀರಿನ ಮೂಲಗಳನ್ನು ಗುರುತಿಸುವುದು.

3 ಸುರಕ್ಷಿತವಲ್ಲದ ನೀರಿನ ಮೂಲಗಳನ್ನು ಟೆಮೋಫೋಸ್‌ನಿಂದ ಶುದ್ಧೀಕರಿಸುವುದು.

4 ರೋಗಿಗಳಿಗೆ ಹುಣ್ಣು ಮುಚ್ಚುವ ಪಟ್ಟಿಗಳನ್ನು ಒದಗಿಸುವುದು.

5 ರೋಗ ಪ್ರಭಾವ ಬೀರಿದ ಪ್ರದೇಶಗಳಲ್ಲಿ ಪ್ರಕರಣಗಳ ಮೇಲ್ವಿಚಾರಣೆಗೆ ಸಾಕಷ್ಟು ನಿಗಾ ವಹಿಸುವುದು.

6 ಆರೋಗ್ಯ ಶಿಕ್ಷಣದ ಕಾರ್ಯಚಟುವಟಿಕೆಯನ್ನು ಚುರುಕುಗೊಳಿಸುವುದು.

ಜನವರಿ 92 ರಿಂದ ನವೆಂಬರ್ 92 ರವರೆಗಿನ ನಾರುಹುಣ್ಣಿನ ಪ್ರಕರಣಗಳು ಈ ಕೆಳಕಂಡಂತಿವೆ:—

| ಕ್ರಮ ಸಂಖ್ಯೆ | ಜಿಲ್ಲೆ | ನಾರುಹುಣ್ಣು ಕಂಡುಬಂದ ಗ್ರಾಮಗಳ ಸಂಖ್ಯೆ | ನಾರುಹುಣ್ಣು ಪ್ರಕರಣಗಳು |
|---|---|---|---|
| 1 | ಬಿಜಾಪುರ | 6 | 61 |
| 2 | ಗುಲ್ಬರ್ಗಾ | 2 | 2 |
| 3 | ರಾಯಚೂರು | 17 | 103 |
| | ಒಟ್ಟು | 25 | 166 |

ಮೆದುಳು ಜ್ವರ:—

ಈ ರೋಗವು ಸಾಮಾನ್ಯವಾಗಿ ತುಮಕೂರು, ಮಂಡ್ಯ, ಕೋಲಾರ, ಚಿತ್ರದುರ್ಗ, ರಾಯಚೂರು ಬಳ್ಳಾರಿ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಗಳಲ್ಲಿ ಕಂಡುಬರುತ್ತದೆ.

1992 ಜನವರಿಯಿಂದ ನವೆಂಬರ್ 92ರ ಅಂತ್ಯದವರೆಗೆ ಮೆದುಳು ಜ್ವರ ಪ್ರಕರಣಗಳು ಕೆಳ ಕಂಡತಿವೆ:—

| ಕ್ರಮ ಸಂಖ್ಯೆ | ಜಿಲ್ಲೆಗಳ ಹೆಸರು | ಪ್ರಕರಣಗಳು | ಮರಣ |
|---|---|---|---|
| 1 | ಬೆಂಗಳೂರು (ನಗರ) | 1 | — |
| 2 | ಬೆಂಗಳೂರು ನಗರ ಜಿಲ್ಲೆ | 1 | — |
| 3 | ಬೆಂಗಳೂರು ಗ್ರಾಮಾಂತರ | 2 | 1 |
| 4 | ಚಿತ್ರದುರ್ಗ | 1 | — |
| 5 | ಕೋಲಾರ | 3 | — |
| 6 | ತುಮಕೂರು | 6 | 1 |
| 7 | ಬಳ್ಳಾರಿ | 26 | 5 |
| 8 | ರಾಯಚೂರು | 3 | — |
| 9 | ಮಂಡ್ಯ | 11 | 5 |
| | ಒಟ್ಟು | 54 | 12 |

ನೆರೆಯ ರಾಜ್ಯವಾದ ಆಂಧ್ರಪ್ರದೇಶದ ಜಿಲ್ಲೆಗಳಿಂದ ಮೆದುಳುಜ್ವರ ಚಿಕಿತ್ಸೆಗಾಗಿ, ರಾಜ್ಯದ ಬಳ್ಳಾರಿ ಮೆಡಿಕಲ್ ಕಾಲೇಜು ಆಸ್ಪತ್ರೆ ಮತ್ತು ಬಳ್ಳಾರಿ ಜಿಲ್ಲಾ ಆಸ್ಪತ್ರೆಗಳಲ್ಲಿ ದಾಖಲಾದ 8 ರೋಗಿಗಳಲ್ಲಿ ಇಬ್ಬರು ರೋಗಿಗಳು ಮೃತಪಟ್ಟಿರುತ್ತಾರೆ. ಸಂಶಯದ ಪ್ರಕರಣಗಳಿಗೆ ಜಿಲ್ಲಾ ಹಾಗೂ ಸಾರ್ವಜನಿಕ ಆಸ್ಪತ್ರೆಗಳಲ್ಲಿ ಚಿಕಿತ್ಸೆ ನೀಡುವುದಕ್ಕೆ ವ್ಯವಸ್ಥೆ ಮಾಡಲಾಗಿದೆ. ಇದು ಪ್ರಾಣಿ ಮೂಲ ರೋಗವಾಗಿರುವುದರಿಂದ ಸ್ಥಳೀಯ ಸಂಸ್ಥೆಗಳ ಸಹಾಯದಿಂದ ಹಂದಿಗಳನ್ನು ವಾಸಸ್ಥಳದಿಂದ ಬೇರ್ಪಡಿಸುವ ಕ್ರಮವನ್ನು ಕೈಗೊಳ್ಳಲಾಗಿದೆ.

ಸೋಂಕು ತಗಲಿರುವ ಹಳ್ಳಿಗಳು ಮತ್ತು ಪಟ್ಟಣಗಳಲ್ಲಿ ಕೀಟನಾಶಕ ಸಿಂಪಡಣೆ ಕಾರ್ಯಕ್ರಮಗಳನ್ನು ಕೈಗೊಳ್ಳಲಾಗಿದೆ. ಈ ರೋಗ ತಡೆಗಟ್ಟಲು ಚುಚ್ಚುಮದ್ದು ಸಹ ಲಭ್ಯವಿರುತ್ತದೆ.

ಕ್ಯಾಸನೂರು ಅರಣ್ಯ ಕಾಯಿಲೆ:

ಈ ಕಾಯಿಲೆ ಶಿವಮೊಗ್ಗ, ಉತ್ತರ ಕನ್ನಡ, ದಕ್ಷಿಣ ಕನ್ನಡ ಮತ್ತು ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಸ್ಥಾನಿಕವಾಗಿರುತ್ತದೆ.

ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ, ಹೊಸನಗರ, ಶಿವಮೊಗ್ಗ ಮತ್ತು ಸೊರಬ ತಾಲ್ಲೂಕುಗಳಲ್ಲಿಯೂ, ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ, ಭಟ್ಕಳ, ಕುಮಟಾ, ಅಂಕೋಲಾ, ಸೂಪಾ ಮತ್ತು ಯಲ್ಲಾಪುರ ತಾಲ್ಲೂಕುಗಳಲ್ಲಿಯೂ, ದಕ್ಷಿಣಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನಲ್ಲಿಯೂ ಹಾಗೂ ಚಿಕ್ಕಮಗಳೂರು ಜಿಲ್ಲೆಯ ಕೊಪ್ಪ ತಾಲ್ಲೂಕಿನಲ್ಲಿ ಈ ರೋಗವು ಕಾಣಿಸಿಕೊಂಡಿರುತ್ತದೆ. ಶಿವಮೊಗ್ಗದ ಸೂಕ್ಷ್ಮಾಣು ಜೀವಿ ಪರಿಶೋಧನಾ ಪ್ರಯೋಗಾಲಯವು ಎರಡು ಕ್ಷೇತ್ರ ಘಟಕಗಳಾದ ಸಾಗರ ಮತ್ತು ಹೊನ್ನಾವರ) ನೆರವಿನಿಂದ ಕಾರ್ಯನಿರ್ವಹಿಸುತ್ತಿದೆ.

ಇದಲ್ಲದೆ ಎರಡು ಕ್ಷೇತ್ರ ಘಟಕಗಳ ಸಿಬ್ಬಂದಿ ಮತ್ತು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳ ಕಛೇರಿಯ ಕ್ಷೇತ್ರ ಸಿಬ್ಬಂದಿಯು ರೋಗವನ್ನು ಪತ್ತೆ ಹಚ್ಚುವುದು, ಚಿಕಿತ್ಸೆ ನೀಡುವುದು ಮತ್ತು ಮುಂಜಾಗರೂಕತಾ ಕ್ರಮಗಳಾದ ನಿಗಾವಣಾ ಕಾರ್ಯಚಟುವಟಿಕೆಗಳನ್ನು ನಡೆಸುತ್ತವೆ.

1992ನೇ ಸಾಲಿನಲ್ಲಿ ವರದಿಯಾದ ಕ್ಯಾಸನೂರು ಅರಣ್ಯ ಕಾಯಿಲೆ ಪ್ರಕರಣಗಳು ಕೆಳ ಕಂಡಂತಿರುತ್ತವೆ.

| ಕ್ರಮಸಂಖ್ಯೆ | ಜಿಲ್ಲೆ | ಪ್ರಕರಣಗಳು | ಮರಣಗಳು |
|---|---|---|---|
| 1 | ಶಿವಮೊಗ್ಗ | 859 | 4 |
| 2 | ಉತ್ತರಕನ್ನಡ | 105 | 1 |
| 3 | ದಕ್ಷಿಣಕನ್ನಡ | — | — |
| 4 | ಚಿಕ್ಕಮಗಳೂರು | 199 | — |
| | ಒಟ್ಟು | 1163 | 5 |

ಶಿವಮೊಗ್ಗ ಸೂಕ್ಷ್ಮಾಣು ಜೀವ ಪರಿಶೋಧನಾ ಪ್ರಯೋಗಶಾಲೆಯಲ್ಲಿ ಪರೀಕ್ಷೆಗೆ ಒಳಗಾದ ಮಾದರಿಗಳ ಫಲಿತಾಂಶ.

| ಮಾದರಿ | ಪರೀಕ್ಷಿಸಿದ್ದು | ಕಾಯಿಲೆ ಸ್ಥಿರೀಕರಿಸಿದ್ದು |
|---|---|---|
| ಮನುಷ್ಯ | 1307 | 188 |
| ಮಂಗ | 22 | 2 |
| ಒಟ್ಟು | 1329 | 190 |

ಮಂಗನ ಕಾಯಿಲೆ ಪ್ರಾರಂಭವಾಗುವ ಪೂರ್ವ ಅವಧಿಯಲ್ಲಿ ಜಾನುವಾರಗಳ ಮೇಲೆ ಕೀಟನಾಶಕಗಳ ಮುಖಾಂತರ ಉಣ್ಣೆ ನಿಯಂತ್ರಣ ಕ್ರಮಗಳನ್ನು ಕೈಗೊಳ್ಳಲಾಗುತ್ತದೆ. ಪಶುವೈದ್ಯ ಇಲಾಖೆ, ಇತರ ಇಲಾಖೆ ಮತ್ತು ಸ್ಥಳೀಯ ಜನರ ಸಹಕಾರದಿಂದ ಈ ಕಾರ್ಯಕ್ರಮವನ್ನು ಕೈಗೊಳ್ಳಲಾಗುತ್ತದೆ.

ಹಂದಿಗೋಡು ಕಾಯಿಲೆ;

ಈ ವಿಚಿತ್ರ ಕಾಯಿಲೆಯು ಶಿವಮೊಗ್ಗ ಮತ್ತು ಚಿಕ್ಕಮಗಳೂರು ಜಿಲ್ಲೆಯ ಗ್ರಾಮಗಳ ಹರಿಜನ ಕುಟುಂಬಗಳಲ್ಲಿ ಕಾಣಿಸಿಕೊಂಡಿರುತ್ತದೆ. ರೋಗಿಗಳು ವಿವಿಧ ಹಂತದ ಕೀಲುಗಳ ವಿಕೃತ ರೂಪದಿಂದ ನರಳುತ್ತಾರೆ

ಪ್ರಕರಣಗಳಿಗೆ ಚಿಕಿತ್ಸೆಯನ್ನು ಅದರ ಲಕ್ಷಣಗಳಿಗೆ ಅನುಸಾರವಾಗಿ ಚಿಕಿತ್ಸೆ ನೀಡಲಾಗುತ್ತದೆ ಮತ್ತು ಪುನರ್‌ವಸತಿ ಸೌಕರ್ಯಗಳನ್ನು ಒದಗಿಸಲಾಗುತ್ತದೆ, ಐ.ಸಿ.ಎಂ.ಆರ್‌.ನ ಸದಸ್ಯರಾದ ಡಾ|| ಎಸ್‌,ಎಸ್‌ ಅಗರವಾಲ್‌ರವರು ದಿನಾಂಕ 17-10-1987ರಲ್ಲಿ ಸಮೀಕ್ಷೆ ಮಾಡಿ ಒದಗಿಸಿದ ಅಂಕಿ ಅಂಶಗಳು ಕೆಳಕಂಡಂತಿವೆ.

| ಕ್ರಮಸಂಖ್ಯೆ | ಜಿಲ್ಲೆಗಳು | ಗ್ರಾಮಗಳು | ಪ್ರಕರಣಗಳ ಸಂಖ್ಯೆ |
|---|---|---|---|
| 1. | ಶಿವಮೊಗ್ಗ | 45 | 349 |
| 2. | ಚಿಕ್ಕಮಗಳೂರು | 31 | 239 |

ಏಯಿಡ್ಸ್ :

1987ನೇ ಸಾಲಿನಿಂದ ರಾಜ್ಯದಲ್ಲಿ ಏಯಿಡ್ಸ್ ನಿಗಾವಣಾ ಚಟುವಟಿಕೆಯನ್ನು ಪ್ರಾರಂಭಿಸಲಾಯಿತು. ಕೆಳಕಂಡ 8 ರಕ್ತ ಪರೀಕ್ಷಾ ಕೇಂದ್ರಗಳು ರಾಜ್ಯದಲ್ಲಿ ಕಾರ್ಯ ನಿರ್ವಹಿಸುತ್ತಿವೆ.

1. ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು.
2. ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆ, ಬೆಂಗಳೂರು.
3. ಕೆ.ಸಿ. ಸಾರ್ವಜನಿಕ ಆಸ್ಪತ್ರೆ, ಮಲ್ಲೇಶ್ವರ, ಬೆಂಗಳೂರು.
4. ಹೆಂಗಸರ ಮತ್ತು ಮಕ್ಕಳ ಆಸ್ಪತ್ರೆ, ಬೆಂಗಳೂರು. ಹೆಚ್‌ಎಸ್‌ಐಎಸ್
5. ಕರ್ನಾಟಕ ವೈದ್ಯಕೀಯ ಮಹಾವಿದ್ಯಾಲಯ, ಹುಬ್ಬಳ್ಳಿ.
6. ಕಿದ್ವಾಯಿ ಗ್ರಂಥಿ ಸ್ಮಾರಕ ಚಿಕಿತ್ಸಾ ಸಂಸ್ಥೆ, ಬೆಂಗಳೂರು.
7. ಕಸ್ತೂರಬಾ ವೈದ್ಯಕೀಯ ಮಹಾವಿದ್ಯಾಲಯ, ಮಣಿಪಾಲ, ದಕ್ಷಿಣ ಕನ್ನಡ ಜಿಲ್ಲೆ.
8. ರಾಷ್ಟ್ರೀಯ ಮಾನಸಿಕ ಆರೋಗ್ಯ ಮತ್ತು ನರವಿಜ್ಞಾನ ಸಂಸ್ಥೆ, ಬೆಂಗಳೂರು.

ಪರೀಕ್ಷಿಸಿದ ರಕ್ತ ಮಾದರಿಗಳು ಮತ್ತು ವೆಸ್ಟರ್ನ್ ಬ್ಲಾಟ್ ಪಾಸಿಟೀವ್‌ಗಳು ಕೆಳಕಂಡಂತಿವೆ

| ಕ್ರಮ ಸಂಖ್ಯೆ | ರಿಸ್ಕ್ ಗ್ರೂಪ್ | ಮಾದರಿಗಳನ್ನು ಪರೀಕ್ಷಿಸಿದ್ದು | ಖಚಿತ ಪಡಿಸಿದ್ದು | ಮರಣ |
|---|---|---|---|---|
| 1 | ಲೈಂಗಿಕ ಕಾಯಿಲೆಗೊಳಪಟ್ಟ ರೋಗಿಗಳು ಮತ್ತು ವೇಶ್ಯೆಯರು | 4128 | 41 | 1 |
| 2 | ವೃತ್ತಿನಿರತ ರಕ್ತದಾನಿಗಳು ಮತ್ತು ಸ್ವಇಚ್ಛಾ ರಕ್ತದಾನಿಗಳು | 44643 | 17 | ... |
| 3 | ವಿದೇಶಿಯರು | 1019 | ... | ... |
| 4 | ಸಲಿಂಗ ಕಾಮಿಗಳು | 4 | ... | ... |
| 5 | ಮಾದಕ ಔಷಧ ಉಪಯೋಗಿಸುವವರು | 12 | ... | ... |
| 6 | ಹಾಲುಣಿಸುವ ತಾಯಂದಿರು | 444 | ... | ... |
| 7 | ಸಂಶಯಾಸ್ಪದ ಏಡ್ಸ್ ರೋಗಿಗಳು | 8 | ... | ... |
| 8 | ರಕ್ತ ಮತ್ತು ರಕ್ತದ ಉತ್ಪಾದನೆಗಳು | 41 | ... | ... |
| 9 | ಇತರೆ | 956 | 1 | ... |
| | ಒಟ್ಟು | 51255 | 59 | 1 |

ಎಲ್ಲಾ ಜಿಲ್ಲಾ ಆಸ್ಪತ್ರೆಗಳು, ಪ್ರಮುಖ ಆಸ್ಪತ್ರೆಗಳು ಮತ್ತು ಸಾರ್ವಜನಿಕ ಆಸ್ಪತ್ರೆಗಳಲ್ಲಿ ರೋಗಿಗಳಿಗೆ ಮತ್ತು ಇತರರಿಗೆ ಏಡ್ಸ್ ಬಗ್ಗೆ ತಿಳುವಳಿಕೆ ನೀಡಲು ಆರೋಗ್ಯ ಶಿಕ್ಷಣ ಕೊಡಲಾಗುತ್ತಿದೆ.

## ಆರೋಗ್ಯ ಶಿಕ್ಷಣ ಮತ್ತು ತರಬೇತಿ

ಆರೋಗ್ಯ ಶಿಕ್ಷಣ ಮತ್ತು ತರಬೇತಿ ವಿಭಾಗದಲ್ಲಿ ಈ ಕೆಳಕಂಡ ವಿಭಾಗಗಳು ಕಾರ್ಯ ನಿರ್ವಹಿಸುತ್ತಿವೆ.

1. ಸಾಮಗ್ರಿಗಳ ವಿಭಾಗ (ಶ್ರವಣ ಚಾಕ್ಷುಕ)
2. ತರಬೇತಿ ವಿಭಾಗ
3. ಕ್ಷೇತ್ರ ಅಧ್ಯಯನ ಮತ್ತು ಪ್ರಾತ್ಯಕ್ಷಿಕ ಘಟಕ
4. ವಿದ್ಯಾರ್ಥಿ ಆರೋಗ್ಯ ಶಿಕ್ಷಣ ವಿಭಾಗ
5. ಶಾಲಾ ಆರೋಗ್ಯ ಸೇವೆಗಳ ವಿಭಾಗ
6. ವಸ್ತು ಪ್ರದರ್ಶನ ವಿಭಾಗ

### ಆರೋಗ್ಯ ಮತ್ತು ತರಬೇತಿ ವಿಭಾಗವು ಕೆಳಕಂಡ ಚಟುವಟಿಕೆಗಳಿಗೆ ಜವಾಬ್ದಾರಿಯುತವಾಗಿರುತ್ತದೆ

1. ಆರೋಗ್ಯ ಶಿಕ್ಷಣ ಚಟುವಟಿಕೆಗಳ ಯೋಜನೆ, ವ್ಯವಸ್ಥೆ ಮತ್ತು ಅನುಷ್ಠಾನಗೊಳಿಸುವ ಜವಾಬ್ದಾರಿಯನ್ನು ಹೊಂದಿರುತ್ತದೆ.

2. ಮೈಸೂರು ದಸರಾದಂತಹ ದೊಡ್ಡ ವಸ್ತು ಪ್ರದರ್ಶನದಲ್ಲಿ ಪಾಲ್ಗೊಳ್ಳುವುದು ಮತ್ತು ಜಾತ್ರೆ/ಸಂತೆ/ಹಬ್ಬಗಳಲ್ಲಿ ಆರೋಗ್ಯಕ್ಕೆ ಸಂಬಂಧಿಸಿದ ವಸ್ತು ಪ್ರದರ್ಶನಗಳನ್ನು ನಡೆಸಲು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳಿಗೆ ನೆರವು ನೀಡುವುದು.

3. ಸಭೆ, ಸಮ್ಮೇಳನ, ವಿಚಾರ ಸಂಕಿರಣ ಇತ್ಯಾದಿಗಳನ್ನು ಏರ್ಪಡಿಸುವುದು.

4. ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ವೈದ್ಯಕೀಯ ಮತ್ತು ಅರೆವೈದ್ಯಕೀಯ ಸಿಬ್ಬಂದಿಯವರಿಗೆ ಮುಂದುವರಿದ ಶಿಕ್ಷಣ ಕಾರ್ಯಕ್ರಮದಲ್ಲಿ ಅಲ್ಪಾವಧಿಯ ಪುನರ್ ಮನನ ತರಬೇತಿಯನ್ನು ನಡೆಸುವುದು.

5. ಆಲ್ ಇಂಡಿಯಾ ಇನ್‌ಸ್ಟಿಟ್ಯೂಟ್ ಆಫ್ ಹೈಜಿಯಂನ್ ಅಂಡ್ ಪಬ್ಲಿಕ್ ಹೆಲ್ತ್, ಕಲ್ಕತ್ತ ಮತ್ತು ಗಾಂಧಿ ಗ್ರಾಮ, ತಮಿಳುನಾಡುಗಳಿಂದ ಬರುವ ಆರೋಗ್ಯ ಶಿಕ್ಷಣದಲ್ಲಿ ಡಿಪ್ಲೊಮಾ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಕ್ಷೇತ್ರ ಮೇಲ್ವಿಚಾರಣೆ ತರಬೇತಿಯನ್ನು ಒದಗಿಸುವುದು.

6. ಐದು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ತರಬೇತಿ ಕೇಂದ್ರಗಳಲ್ಲಿ ವಿವಿಧೋದ್ದೇಶ ಆರೋಗ್ಯ ಕಾರ್ಯಕರ್ತರಿಗೆ (ಪುರುಷರು) ಮೂಲ ತರಬೇತಿ, ಎರಡು ಕುಷ್ಠರೋಗ ತರಬೇತಿ ಕೇಂದ್ರಗಳಲ್ಲಿ ಕುಷ್ಠರೋಗದ ಬಗ್ಗೆ ತರಬೇತಿಯನ್ನು, ಏಳು ಆರೋಗ್ಯ ನಿರೀಕ್ಷಕರ ಕೇಂದ್ರಗಳಲ್ಲಿ ಆರೋಗ್ಯ ನಿರೀಕ್ಷಕರ ತರಬೇತಿಯನ್ನು ಮತ್ತು ಆರು ಕ್ಷ–ಕಿರಣ ಕೇಂದ್ರಗಳಲ್ಲಿ ಕ್ಷ–ಕಿರಣ ತಂತ್ರಜ್ಞರ ತರಬೇತಿಯನ್ನು ನೀಡುವುದು.

7. ದೇಶದೊಳಗೆ/ಹೊರದೇಶಗಳಿಗೆ ಫೆಲೋಷಿಪ್/ತರಬೇತಿ ಮತ್ತು ಕಾರ್ಯಾಗಾರದಲ್ಲಿ ಭಾಗವಹಿಸಲು ಇಲಾಖೆಯ ಅಧಿಕಾರಿಗಳು ಮತ್ತು ಸಿಬ್ಬಂದಿಯನ್ನು ನಿಯೋಜಿಸುವುದು.

8. ರಾಜ್ಯದಲ್ಲಿ ಪ್ರಾಥಮಿಕ, ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ಶಾಲಾ ಆರೋಗ್ಯ ಸೇವೆಗಳ ಯೋಜನೆ ಅನುಷ್ಠಾನ ಮತ್ತು ಮೌಲ್ಯಮಾಪನ ಮಾಡುವ ಜವಾಬ್ದಾರಿ.

9. ಆರೋಗ್ಯ ಶಿಕ್ಷಣ ಸಾಮಗ್ರಿಗಳ ತಯಾರಿಕೆ, ಪ್ರಕಟಣೆ ದಾಸ್ತಾನು ಮತ್ತು ವಿತರಿಸುವಿಕೆ.





## 1992–93ನೇ ಸಾಧನೆಗಳು (ನವೆಂಬರ್ 1992ರ ಅಂತ್ಯದವರೆಗೆ)

1. ದಿನಾಂಕ 7–4–1992ರಂದು "ಹೃದಯ ವಿಂಡಿತ—ಆರೋಗ್ಯದ ಸಂಕೇತ" ಎಂಬ ವಿಶ್ವ ಆರೋಗ್ಯ ದಿನಾಚರಣೆಯ ಘೋಷಣೆಯನ್ನು ಹೆಚ್ಚು ಉಪಯುಕ್ತ ರೀತಿಯಲ್ಲಿ ರಾಜ್ಯ ಮಟ್ಟ, ಜಿಲ್ಲಾ ಮತ್ತು ಪ್ರಾಥಮಿಕ ಆರೋಗ್ಯ ಕೇಂದ್ರ ಮಟ್ಟಗಳಲ್ಲಿ ಆಚರಿಸಲಾಯಿತು.

2. 1992ರ ಮೈಸೂರು ದಸರಾ ವಸ್ತು ಪ್ರದರ್ಶನದಲ್ಲಿ ಆರೋಗ್ಯ ಮಳಿಗೆಯನ್ನು ದಿನಾಂಕ 3–10–1992ರಿಂದ 15–12–1992ರ ವರೆಗೆ ತೆರೆಯಲಾಗಿತ್ತು. ಈ ಪ್ರದರ್ಶನದಲ್ಲಿ ಇಲಾಖೆಯು ಬಹುತೇಕ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಕಾರ್ಯಕ್ರಮಗಳ ಅನುಷ್ಠಾನದ ಬಗೆಗಿನ ಮಾಹಿತಿಯನ್ನು ಪ್ರದರ್ಶಿಸಲಾಯಿತು.

3. "ಶುಶ್ರೂಷಾ" ಕಾರ್ಯಕ್ರಮದ ಬಗ್ಗೆ ಸ್ಥಬ್ಧ ಚಿತ್ರ ತಯಾರಿಸಲಾಯಿತು ಮತ್ತು ದಿನಾಂಕ 17–10–1992ರಂದು ಬೆಂಗಳೂರು ಅರಮನೆಯ ಆವರಣದಲ್ಲಿ ಸರ್ಕಾರದ ವತಿಯಿಂದ ನಡೆದ ಸಮಾರಂಭದಲ್ಲಿ (ಸಾಧನಾ ಸಮಾವೇಶ) ಭಾಗವಹಿಸಲಾಗಿದ್ದಿತು.

4. ಕರ್ನಾಟಕ ರಾಜ್ಯದ 10 ಜಿಲ್ಲೆಗಳಲ್ಲಿ ವಿಶ್ವಬ್ಯಾಂಕಿನ ನೆರವಿನಿಂದ ರಾಜ್ಯದ ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ಯ ಇಲಾಖೆಯು ಅನುಷ್ಠಾನಗೊಳಿಸಿರುವ ಸಮಗ್ರ ಗ್ರಾಮೀಣ ನೀರು ಸರಬರಾಜು ಮತ್ತು ಪರಿಸರ ನೈರ್ಮಲ್ಯದ ಯೋಜನಾ ವರದಿಯನ್ನು ತಯಾರಿಸಲು ಈ ವಿಭಾಗವು ಪಾಲ್ಗೊಂಡಿದ್ದಿತು.

5. ನೀರಿನ ಗುಣಮಟ್ಟ ನೋಡಿಕೊಳ್ಳುವ, ಆರೋಗ್ಯ ಸಂಪರ್ಕ ಕಾರ್ಯಕ್ರಮ ಮತ್ತು ತರಬೇತಿಗಳ ಬಗ್ಗೆ ಬಂದಿರುವ ವರದಿಗಳನ್ನು ಪರಿಶೀಲಿಸಿ ಯೋಜನೆಯು ಯಶಸ್ವಿಯಾಗಲು ಅಗತ್ಯ ಸಲಹೆಗಳನ್ನು ನೀಡಲಾಯಿತು.

6. ನೆದರ್‌ಲ್ಯಾಂಡ್ಸ್ ಸರ್ಕಾರ ಮತ್ತು ಡ್ಯಾನಿಡಾದ ನೆರವಿನೊಂದಿಗೆ ಸಮಗ್ರ ಗ್ರಾಮೀಣ ನೀರು ಸರಬರಾಜು ಮತ್ತು ಪರಿಸರ ನೈರ್ಮಲ್ಯ ಯೋಜನೆಗಳ ವರದಿಯನ್ನು ತಯಾರಿಸಲು ಬೇಕಾದ ಅಗತ್ಯ ಸಲಹೆಗಳನ್ನು ನೀಡುವಲ್ಲಿ ಈ ವಿಭಾಗವು ಕಾರ್ಯ ಪ್ರವೃತವಾಗಿದ್ದಿತು.

7) ರಾಜ್ಯದ 11 ಜಿಲ್ಲೆಗಳಲ್ಲಿರುವ 90 ತರಬೇತಿ ಕೇಂದ್ರಗಳಲ್ಲಿ ಕೈಮಗ್ಗ ನೇಕಾರಿಕೆ ತರಬೇತಿ ಪಡೆಯುತ್ತಿರುವ ಗ್ರಾಮೀಣ ಮಹಿಳೆಯರಿಗೆ ವೈದ್ಯಕೀಯ ಚಿಕಿತ್ಸೆ ಹಾಗೂ ಆರೋಗ್ಯ ಶಿಕ್ಷಣ ಸೇವೆಗಳನ್ನು ಒದಗಿಸಲು ಈ ವಿಭಾಗವು ಅಗತ್ಯ ಮಾರ್ಗದರ್ಶನವನ್ನು ನೀಡುತ್ತಿದೆ. ಈ ಬಗ್ಗೆ 15 ದಿನಗಳಿಗೊಮ್ಮೆ ಆರೋಗ್ಯ ಕೇಂದ್ರದ ವೈದ್ಯರುಗಳು ಈ ಕೇಂದ್ರಗಳಿಗೆ ಭೇಟಿ ನೀಡುವರು. ಪ್ರತಿಯೊಂದು ತರಬೇತಿ ಕೇಂದ್ರಕ್ಕೂ 2,000 ರೂ. ಗಳ ಔಷಧಿಗಳನ್ನು ಸರಬರಾಜು ಮಾಡಲು ಸೂಕ್ತಕ್ರಮ ಕೈಗೊಳ್ಳಲಾಗಿದೆ.

8) ಎಲ್ಲಾ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು, ಜಿಲ್ಲಾ ಶಸ್ತ್ರ ಚಿಕಿತ್ಸಕರು ಮತ್ತು ದೊಡ್ಡ ಆಸ್ಪತ್ರೆಗಳ ಅಧೀಕ್ಷಕರಿಗೆ ಡಿಸೆಂಬರ್ 1ರಂದು "ವಿಶ್ವ ಏಯ್ಡ್ಸ್" ದಿನಾಚರಣೆಯನ್ನು ಯಶಸ್ವಿಯಾಗಿ ಆಚರಿಸಲು ಮಾರ್ಗದರ್ಶನವನ್ನು ನೀಡಲಾಗಿದ್ದಿತು.

9) ಭಾರತೀಯ ಮಧುಮೇಹ ರೋಗ ಸಂಸ್ಥೆಯ ಅಧ್ಯಕ್ಷರಾದ ಪ್ರೊ. ಜಿ. ಎಸ್. ಬಜಾಜ್ ರವರು ಮಧುಮೇಹ ರೋಗದ ತತ್ವಗಳು ಮತ್ತು ನಿರ್ವಹಣೆ ಎಂಬ ವಿಷಯದ ಮೇಲೆ ಬರೆದಿರುವ ಎರಡು ಆಂಗ್ಲ ಭಾಷೆಯ ಪುಸ್ತಕಗಳನ್ನು

(1) ಪ್ರಾಥಮಿಕ ಆರೋಗ್ಯ ಕಾರ್ಯಕರ್ತರಿಗೆ ಮತ್ತು

2) ಶುಶ್ರೂಷಾ ದಾದಿಯರು ಮತ್ತು ಆರೋಗ್ಯ ವೃತ್ತಿ ನಿರತರಿಗೆ ಕನ್ನಡಕ್ಕೆ ಅನುವಾದ ಮಾಡಿ ಮುದ್ರಿಸಲಾಗಿದೆ.

10) 1992ರಲ್ಲಿ ವಿಶ್ವ ಆರೋಗ್ಯ ದಿನಾಚರಣೆ ಆಚರಿಸುವ ಸಂದರ್ಭದಲ್ಲಿ "ಹೃದ್ರೋಗಗಳು" ಎಂಬ ವಿಷಯಕ್ಕೆ ಸಂಬಂಧಿಸಿದಂತೆ ಪುಸ್ತಕ ಮತ್ತು ಮಡಿಕೆ ಪತ್ರಗಳನ್ನು ಕನ್ನಡದಲ್ಲಿ ಹೊರತಂದು ಎಲ್ಲಾ ಜಿಲ್ಲೆಗಳಿಗೆ ಸರಬರಾಜು ಮಾಡಲಾಗಿದೆ.

11) ರಾಷ್ಟ್ರೀಯ ಕಾರ್ಯಕ್ರಮಗಳಾದ ಅಂಧತ್ವ ನಿವಾರಣೆ, ಪೌಷ್ಠಿಕ ಆಹಾರ ಮತ್ತು ಕುಷ್ಠರೋಗ ನಿಯಂತ್ರಣ ಮುಂತಾದ ವಿಷಯಗಳ ಬಗ್ಗೆ ಆರೋಗ್ಯ ಶಿಕ್ಷಣ ಸಾಮಗ್ರಿಗಳಾದ ಭಿತ್ತಿ ಪತ್ರಿಗಳು, ಮಡಿಕೆ ಪತ್ರಗಳು ಮತ್ತು ಕರ ಪತ್ರಗಳನ್ನು ಮುದ್ರಿಸಲು ಕ್ರಮ ತೆಗೆದುಕೊಳ್ಳಲಾಗಿದೆ.

## ಕ್ಷೇತ್ರಾಧ್ಯಯನ ಮತ್ತು ಪ್ರಾತ್ಯಕ್ಷಿಕ ಘಟಕದ ಕಾರ್ಯ ಚಟುವಟಿಕೆಗಳು

ಪ್ರಾಥಮಿಕ ಆರೋಗ್ಯ ಘಟಕದ ಸಿಬ್ಬಂದಿ ವರ್ಗ, ಸೊಂಡೆಕೊಪ್ಪ, ಸಮಾಜ ಕಲ್ಯಾಣ ಇಲಾಖೆ, ಕ್ಷಣ ಇಲಾಖೆ ಮತ್ತು ಯುವಕ ಸಂಘ ಹಾಗೂ ಸ್ಥಳೀಯ ಸಂಘ ಸಂಸ್ಥೆಗಳ ಸಹಕಾರದಿಂದ ಂಗನವಾಡಿ ಶಿಕ್ಷಕರಿಗೆ ತಾಯಿ ಮಕ್ಕಳ ಆರೋಗ್ಯ, ಪೌಷ್ಟಿಕ/ಆಹಾರ, ಲಸಿಕೆ, ಜನಸಂಖ್ಯಾ ಶಿಕ್ಷಣ ಷಯಗಳ ಬಗ್ಗೆ ತರಬೇತಿಯನ್ನು ನೀಡಲಾಗಿದೆ.

ಹೆಸರುಘಟ್ಟದ ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ ಹೊಂದಿಕೊಂಡ ಸೊಂಡೆಕೊಪ್ಪ ಆರೋಗ್ಯ ಟಕಕ್ಕೆ ಸೇರಿದ 24 ಗ್ರಾಮಗಳಲ್ಲಿ ಅನುಷ್ಠಾನಗೊಳಿಸಿದ ಆರೋಗ್ಯ ಶಿಕ್ಷಣದ ಕಾರ್ಯ ಚಟುವಟಿಕೆಗಳು ಈ ಕೆಳಕಂಡಂತೆ ಇವೆ.

| | | |
|---|---|---|
| 1 | ಆರೋಗ್ಯ ಸಿಬ್ಬಂದಿಗೆ ತರಬೇತಿ ನೀಡಿದ ಸಂಖ್ಯೆ ... | [illegible] |
| 2. | ಆರೋಗ್ಯ ಅರಿವನ್ನು ಶಾಲಾ ಮಕ್ಕಳಲ್ಲಿ ಮೂಡಿಸಲು ತರಬೇತಿ ಹೊಂದಿದ ಶಿಕ್ಷಕರ ಸಂಖ್ಯೆ ... | [illegible] |
| 3. | ಕುಟುಂಬವಾರು ಮಾಹಿತಿಯನ್ನು ಪರಿಣಾಮಕಾರಿಯಾಗಿ ಸಮೀಕ್ಷೆ ನಡೆಸಲು ಆಯ್ದ ಹಳ್ಳಿಗಳ ಸಂಖ್ಯೆ ... | 1 |
| 4. | ಪೋಷಕರ—ಶಿಕ್ಷಕರ ಸಭೆಗಳನ್ನು ನಡೆಸಿದ ಸಂಖ್ಯೆ ... | 12 |
| 5. | ತಾಯಿ–ಮಕ್ಕಳ ಆರೋಗ್ಯ, ಪೌಷ್ಟಿಕ ಆಹಾರ ಮತ್ತು ಕುಟುಂಬ ಕಲ್ಯಾಣ ವಿಷಯಗಳ ಬಗ್ಗೆ ಮಹಿಳಾ ಮುಖಂಡರಿಗೆ ಸಭೆಗಳನ್ನು ನಡೆಸಿದ ಸಂಖ್ಯೆ ... | 3 |
| 6. | ವಿವಿಧ ಆರೋಗ್ಯ ಕಾರ್ಯಕ್ರಮಗಳ ಬಗ್ಗೆ ನಡೆಸಲಾದ ಗುಂಪುಗಳು ಸಭೆ ... | 26 |
| 7. | 4,5,6 ಮತ್ತು 7ನೇ ತರಗತಿಯ ವಿದ್ಯಾರ್ಥಿಗಳಿಗೆ ಆರೋಗ್ಯ ಶಿಕ್ಷಣ ನೀಡಿದ ಸಭೆಗಳ ಸಂಖ್ಯೆ ... | 24 |
| 8. | ನೈರ್ಮಲೀಕರಣ, ಶೌಚಾಲಯಗಳನ್ನು ಕಟ್ಟಿಸಲು ಸಂಪರ್ಕಿಸಿದ ಕುಟುಂಬಗಳ ಸಂಖ್ಯೆ ... | 18 |
| 9. | ಕೈತೋಟಗಳನ್ನು ಬೆಳೆಸಲು ಸಂಪರ್ಕಿಸಿದ ಕುಟುಂಬಗಳ ಸಂಖ್ಯೆ ... | 35 |
| 10. | ಆರೋಗ್ಯ ಶಿಕ್ಷಣ ಕಾರ್ಯಕ್ರಮದ ಬಗ್ಗೆ ಅಂಗನವಾಡಿ ಕಾರ್ಯಕರ್ತೆಯರಿಗೆ ತರಬೇತಿ ನೀಡಿದ ಸಂಖ್ಯೆ ... | 46 |

## ವಿದ್ಯಾರ್ಥಿ ಆರೋಗ್ಯ ಶಿಕ್ಷಣ ವಿಭಾಗ

ವಿದ್ಯಾರ್ಥಿ ಆರೋಗ್ಯ ಶಿಕ್ಷಣ ವಿಭಾಗವು ರಾಜ್ಯದ ಎಲ್ಲಾ ಪ್ರಾಥಮಿಕ ಶಾಲೆಗಳಲ್ಲಿ ಮತ್ತು ಶಿಕ್ಷಕರ ತರಬೇತಿ ಸಂಸ್ಥೆಗಳಲ್ಲಿ ಆರೋಗ್ಯ ಶಿಕ್ಷಣ ಕಾರ್ಯಕ್ರಮಗಳನ್ನು ಯೋಜಿಸಲು, ವ್ಯವಸ್ಥೆಗೊಳಿಸಲು ಮತ್ತು ಅನುಷ್ಠಾನಗೊಳಿಸಲು ಜವಾಬ್ದಾರಿಯುತವಾಗಿರುತ್ತವೆ.

1 ರಿಂದ 7ನೇ ತರಗತಿಯ ಹಾಲಿ ಇರುವ ಆರೋಗ್ಯ ಪಠ್ಯ ಪುಸ್ತಕಗಳು ಮತ್ತು ಪಾಠಕ್ರಮಗಳನ್ನು 1992ರ ಆಗಸ್ಟ್ ಮತ್ತು ಸೆಪ್ಟೆಂಬರ್ ತಿಂಗಳಲ್ಲಿ ಪರಿಶೀಲಿಸಿ ಸರ್ಕಾರದ ಆದೇಶದಂತೆ ಪರಿಷ್ಕರಿಸಲಾಯಿತು. 8 ರಿಂದ 10ನೇ ತರಗತಿಯ ವಿದ್ಯಾರ್ಥಿಗಳ ಪಠ್ಯ ಪುಸ್ತಕವನ್ನು ಶಿಕ್ಷಣ ಇಲಾಖೆಯು ಪರಿಷ್ಕರಿಸುತ್ತಿದೆ. 8 ರಿಂದ 10ನೇ ತರಗತಿಯ ಶಾಲಾ ಮಕ್ಕಳಿಗೆ ಆರೋಗ್ಯಕ್ಕೆ ಸಂಬಂಧಿಸಿದ ವಿಚಾರಗಳನ್ನು ಬೋಧಿಸಲು ಶಿಕ್ಷಕರ ಮಾರ್ಗದರ್ಶನ ಹೊತ್ತಿಗೆಯನ್ನು ಸಿದ್ಧಪಡಿಸಲು ಕ್ರಮ ತೆಗೆದುಕೊಂಡಿದೆ.

## ಶಾಲಾ ಆರೋಗ್ಯ ಕಾರ್ಯಕ್ರಮ

ಗ್ರಾಮೀಣ ಪ್ರದೇಶದಲ್ಲಿರುವ ಎಲ್ಲಾ ಪ್ರಾಥಮಿಕ ಮತ್ತು ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ಶಾಲಾ ಆರೋಗ್ಯ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲಾಗಿದೆ. ಕೇಂದ್ರ ಸರ್ಕಾರದ ಮಾರ್ಗ ಸೂಚಿಯಂತೆ ಈ ಕಾರ್ಯಕ್ರಮವನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸಲು ಎಲ್ಲಾ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳನ್ನೂ ಕೋರಲಾಗಿದೆ. ವಿದ್ಯಾರ್ಥಿಗಳಿಗೆ ವೈದ್ಯಕೀಯ ಪರೀಕ್ಷೆ, ಮಕ್ಕಳಿಗೆ ಡಿ.ಟಿ. ಮತ್ತು ಟಿ.ಟಿ.ಯಂತಹ ಲಸಿಕೆ ಹಾಕುವುದು, ಸಣ್ಣ ಪುಟ್ಟ ಕಾಯಿಲೆಗಳಿಗೆ ಚಿಕಿತ್ಸೆ ನೀಡುವುದು ಮತ್ತು ವಿಶೇಷ ಚಿಕಿತ್ಸೆ-ಬೇಕಾದ ವಿದ್ಯಾರ್ಥಿಗಳನ್ನು ಹತ್ತಿರದ ಆಸ್ಪತ್ರೆಗಳಿಗೆ ಕಳುಹಿಸಿಕೊಡುವುದು. ಮುಂತಾದ ಕಾರ್ಯ ಚಟುವಟಿಕೆಗಳನ್ನು ನಡೆಸಲಾಗುತ್ತಿದೆ. ಶಿಕ್ಷಕರಿಗೆ ಮತ್ತು ವಿದ್ಯಾರ್ಥಿಗಳಿಗೆ ವೈಯಕ್ತಿಕ ಆರೋಗ್ಯ, ಪರಿಸರ ನೈರ್ಮಲ್ಯ, ಕುಡಿಯುವ ನೀರು, ಶೌಚಾಲಯಗಳ ಬಳಕೆ ಇತ್ಯಾದಿಗಳ ಬಗ್ಗೆ ಆರೋಗ್ಯ ಶಿಕ್ಷಣವನ್ನು ಕೊಡಲಾಗುತ್ತಿದೆ.

### 1992-93ನೇ (ನವೆಂಬರ್ 1992ರ ಅಂತ್ಯದವರೆಗೆ) ಸಾಲಿನ ಶಾಲಾ ಆರೋಗ್ಯ ಕಾರ್ಯಕ್ರಮಗಳ ಪ್ರಗತಿ :—

| | | | |
|---|---|---|---|
| 1. | ಶಾಲೆಗಳಲ್ಲಿನ ವಿದ್ಯಾರ್ಥಿಗಳ ಸಂಖ್ಯೆ | ... | 25,30,127 |
| 2. | ವೈದ್ಯಕೀಯ ಪರೀಕ್ಷೆ ನಡೆಸಲಾದ ವಿದ್ಯಾರ್ಥಿಗಳ ಸಂಖ್ಯೆ | ... | 3,94,326 |
| 3. | ನ್ಯೂನತೆಗಳು ಕಂಡು ಬಂದ ವಿದ್ಯಾರ್ಥಿಗಳ ಸಂಖ್ಯೆ | ... | 35,966 |
| 4. | ನ್ಯೂನತೆಯುಳ್ಳ ವಿದ್ಯಾರ್ಥಿಗಳಿಗೆ ಚಿಕಿತ್ಸೆಗಾಗಿ ಭೇಟಿ ನೀಡಿದ ಸಂಖ್ಯೆ | ... | 16,314 |

### ಲಸಿಕೆ ಮತ್ತು ಚುಚ್ಚುಮದ್ದು ಒದಗಿಸಿದ್ದು

| | | | |
|---|---|---|---|
| 1. | ಡಿ ಮತ್ತು ಟಿ. ಲಸಿಕೆಗಳನ್ನು ಪಡೆದ ವಿದ್ಯಾರ್ಥಿಗಳ ಸಂಖ್ಯೆ | ... | 4,39,172 |
| 2. | ಟಿ.ಟಿ. ಲಸಿಕೆಯನ್ನು ಪಡೆದ ವಿದ್ಯಾರ್ಥಿಗಳ ಸಂಖ್ಯೆ | ... | 3,23,875 |
| 3. | ಶಾಲೆಗಳಲ್ಲಿ ಆರೋಗ್ಯಕ್ಕೆ ಸಂಬಂಧಿಸಿದ ವಿಚಾರಗಳನ್ನು ಚರ್ಚಿಸಿದ ಸಂಖ್ಯೆ | ... | 81,647 |

ರಾಜ್ಯದಲ್ಲಿರುವ 4 ವಿಭಾಗೀಯ ಸಹ ನಿರ್ದೇಶಕರ ಕಾರ್ಯಾಲಯಕ್ಕೆ ಹೊಂದಿಕೊಂಡಿರುವ ಸಂಚಾರಿ ನೇತ್ರ ಹಾಗೂ ದಂತ ಚಿಕಿತ್ಸಾ ಘಟಕಗಳು ಈ ಕಾರ್ಯಕ್ರಮದಡಿಯಲ್ಲಿ ಕಾರ್ಯ ನಿರ್ವಹಿಸುತ್ತಿವೆ.

ಸಂಚಾರಿ ನೇತ್ರ, ಹಾಗೂ ದಂತ ಚಿಕಿತ್ಸೆಯ ಘಟಕಗಳ 1992-93ನೇ ಸಾಲಿನ ಪ್ರಗತಿ (ಏಪ್ರಿಲ್ 92 ರಿಂದ ನವೆಂಬರ್ 92ರ ಅಂತ್ಯದವರೆಗೆ).

| | | | |
|---|---|---|---|
| 1) | ಭೇಟಿ ನೀಡಿದ ಜಿಲ್ಲೆಗಳ ಸಂಖ್ಯೆ | – | 20 |
| 2) | ಪ್ರಾಥಮಿಕ ಆರೋಗ್ಯ ಕೇಂದ್ರಗಳಿಗೆ ಭೇಟಿ ನೀಡಿದ ಸಂಖ್ಯೆ | – | 56 |
| 3) | ಭೇಟಿಯಾದ ಶಾಲೆಗಳ ಸಂಖ್ಯೆ | – | 388 |

### ದಂತ

| | | | |
|---|---|---|---|
| 1) | ಪರೀಕ್ಷಿಸಿದ ವಿದ್ಯಾರ್ಥಿಗಳ ಸಂಖ್ಯೆ | – | 23830 |
| 2) | ನ್ಯೂನತೆ ಕಂಡಬಂದವರ ಸಂಖ್ಯೆ | – | 7352 |
| 3) | ಚಿಕಿತ್ಸೆಗಳಿಗೆ ಒಳಗಾದವರ ಸಂಖ್ಯೆ | – | 1730 |

ನೇತ್ರ

| | | |
|---|---|---|
| 1) ಪರೀಕ್ಷಿಸಿದ ವಿದ್ಯಾರ್ಥಿಗಳ ಸಂಖ್ಯೆ | – | 34988 |
| 2) ನ್ಯೂನತೆ ಕಂಡುಬಂದವರ ಸಂಖ್ಯೆ | – | 2467 |
| 3) ಚಿಕಿತ್ಸೆಗಳಿಗೆ ಒಳಗಾದವರ ಸಂಖ್ಯೆ | – | 2039 |
| 4) ಕನ್ನಡಕಗಳನ್ನು ಬಳಸಲು ಸಲಹೆ ನೀಡಿದ ವಿದ್ಯಾರ್ಥಿಗಳ ಸಂಖ್ಯೆ. | – | 509 |
| 5) ಆರೋಗ್ಯ ಸಂಸ್ಥೆಗಳಿಗೆ ಕಳುಹಿಸಿದ ವಿದ್ಯಾರ್ಥಿಗಳ ಸಂಖ್ಯೆ. | – | 5207 |

ಡಿಸೆಂಬರ್ 1992 ರಿಂದ ಮಾರ್ಚ್ 1993ರ ಅಂತ್ಯದವರೆಗೆ ಯೋಜಿಸಲಾಗಿರುವ ಕಾರ್ಯ ಚಟುವಟಿಕೆಗಳು ಕೆಳಕಂಡಂತಿವೆ.

1) 1992ರ ಡಿಸೆಂಬರ್ ತಿಂಗಳಲ್ಲಿ ಹಾಸನದಲ್ಲಿ ನಡೆಯುವ ದನಗಳ ಜಾತ್ರೆಯಲ್ಲಿ ಮತ್ತು 1993ರ ಫೆಬ್ರವರಿ ತಿಂಗಳಲ್ಲಿ ತುಮಕೂರು ಜಿಲ್ಲೆ ಕ್ಯಾತಸಂದ್ರದಲ್ಲಿ ನಡೆಯುವ ವ್ಯವಸಾಯ ಮತ್ತು ಕೈಗಾರಿಕಾ ವಸ್ತು ಪ್ರದರ್ಶನದಲ್ಲಿ ಆರೋಗ್ಯ ಮಳಿಗೆಯನ್ನು ತೆರೆಯಲು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳಿಗೆ ಈ ವಿಭಾಗವು ನೆರವು ನೀಡುವುದು.

2) 1992-93ನೇ ಸಾಲಿನಲ್ಲಿ ಶಿಕ್ಷಣ ಮುಂದುವರಿಕೆ ತರಬೇತಿ ಕಾರ್ಯಕ್ರಮವನ್ನು ಮುಂದುವರಿಸಿ ಉಳಿದ ತಂಡಗಳಿಗೆ ಮುಂದುವರೆದ ಶಿಕ್ಷಣದ ತರಬೇತಿಯನ್ನು ನೀಡಲಾಗುವುದು.

3) ವಿವಿಧೋದ್ದೇಶ ಕಾರ್ಯಕರ್ತರಿಗೆ (ಪುರುಷರು) 4 ಕೇಂದ್ರಗಳಲ್ಲಿ ತರಬೇತಿ ನೀಡಲು ಕ್ರಮ ತೆಗೆದುಕೊಳ್ಳಲಾಗುವುದು.

4) ಪ್ರಸಕ್ತ ಸಾಲಿನಲ್ಲಿ ಆರೋಗ್ಯ ನಿರೀಕ್ಷಕರ ತರಬೇತಿ ಕೇಂದ್ರಗಳಲ್ಲಿ ತರಬೇತಿ ಹೊಂದಿದ ಕಿರಿಯ ಆರೋಗ್ಯ ಸಹಾಯಕರಿಗೆ ತರಬೇತಿಯನ್ನು ಕೊಡಲಾಗುವುದು.

5) ಪ್ರಸಕ್ತ ಸಾಲಿನಲ್ಲಿ 6 ಜಿಲ್ಲಾ ಆಸ್ಪತ್ರೆಯಲ್ಲಿ ಕ್ಷ-ಕಿರಣ ತಂತ್ರಜ್ಞರ ತರಬೇತಿಯನ್ನು ಕೊಡಲಾಗುವುದು.

6) ವೈಯಕ್ತಿಕ ಆರೋಗ್ಯ ಮಂಗನ ಕಾಯಿಲೆ. ನಾರುಹುಣ್ಣಿನ ಬಗ್ಗೆ ಯು-ಮ್ಯಾಟಿಕ್ ಚಿತ್ರಗಳನ್ನು ತಯಾರಿಸಲು ಕ್ರಮ ತೆಗೆದುಕೊಳ್ಳಲಾಗುವುದು.

## ಪೌಷ್ಟಿಕ ಆಹಾರ ಕಾರ್ಯಕ್ರಮ

ಪೌಷ್ಟಿಕ ಆಹಾರ ವಿಭಾಗವು ಈ ಕೆಳಗಿನ ಕಾರ್ಯಕ್ರಮಗಳನ್ನು ಜಾರಿಗೊಳಿಸುತ್ತಿದೆ.

1) ಎ ಅನ್ನಾಂಗ ಕೊರತೆ ನಿವಾರಣಾ ಕಾರ್ಯಕ್ರಮ.

2) ಸಮಗ್ರ ಬಾಲವಿಕಾಸ ಸೇವೆಗಳ ಯೋಜನೆ.

3) ರಾಷ್ಟ್ರೀಯ ಗಳಗಂಡ ರೋಗ ನಿಯಂತ್ರಣಾ ಕಾರ್ಯಕ್ರಮ.

4) ತರಬೇತಿಯನ್ನೊಳಗೊಂಡಂತೆ ಪೌಷ್ಟಿಕ ಆಹಾರ ಶಿಕ್ಷಣ ಚಟುವಟಿಕೆಗಳು.

5) ರಾಷ್ಟ್ರೀಯ ಪೌಷ್ಟಿಕ ಆಹಾರ ಸಮೀಕ್ಷಾ ತಂಡದಿಂದ ನಡೆಯುವ ಪೌಷ್ಟಿಕ ಆಹಾರ ಸಮೀಕ್ಷೆ.

### 1) 'ಎ' ಅನ್ನಾಂಗ ಕೊರತೆ ನಿವಾರಣಾ ಕಾರ್ಯಕ್ರಮ :—

'ಎ' ಅನ್ನಾಂಗದ ತೀವ್ರ ಕೊರತೆಯಿಂದುಂಟಾಗುವ ಅಂಧತ್ವವನ್ನು ತಡೆಗಟ್ಟುವ ಸಲುವಾಗಿ ರಾಜ್ಯದ ಗ್ರಾಮಾಂತರ ಪ್ರದೇಶದಲ್ಲಿನ 1 ರಿಂದ 5 ವರ್ಷದ ಮಕ್ಕಳಿಗೆ ತಿಂಗಳಿಗೊಮ್ಮೆ 2 ಲಕ್ಷ ಇಂಟರ್ ನ್ಯಾಷನಲ್ ಯುನಿಟ್‌ಗಳಷ್ಟು "ಎ" ಅನ್ನಾಂಗ ಪ್ರಬಲ ಪಾಕವನ್ನು ಬಾಯಿ ಮೂಲಕ ಕೊಡಲಾಗುತ್ತಿದೆ. ವರ್ಷದಲ್ಲಿ ಮೊದಲನೇ ಸುತ್ತಿನ ವಿತರಣೆ ಜೂನ್-ಜುಲೈ ತಿಂಗಳಿನಲ್ಲಿ ಮತ್ತು ಎರಡನೇ ಸುತ್ತಿನ ವಿತರಣೆ ಡಿಸೆಂಬರ್ ಜನವರಿ ತಿಂಗಳಿನಲ್ಲಿ ನಡೆಯುತ್ತಿದೆ.

## 1992-93ನೇ ಸಾಲಿನ ಗುರಿ ಮತ್ತು ಸಾಧನೆ (1992ರ ನವೆಂಬರ್ ಅಂತ್ಯದವರೆಗೆ)

| ಗುರಿ. | ಸಾಧನೆ<br>ಮೊದಲನೇ ಸುತ್ತು | ಸಾಧನೆ<br>ಎರಡನೇ ಸುತ್ತು |
|---|---|---|
| 27.5 ಲಕ್ಷ | 22.64.452<br>(82.3%) | ವಿತರಣೆ<br>ನಡೆಯುತ್ತಿದೆ. |

ಈ ಕಾರ್ಯಕ್ರಮದ ಪ್ರಗತಿಯನ್ನು ಉತ್ತಮಗೊಳಿಸುವ ಸಲುವಾಗಿ ಮಹಿಳಾ ಆರೋಗ್ಯ ಕಾರ್ಯಕರ್ತೆಯರಿಗೆ ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ಪುನರ್ ಮನನ ಕಾರ್ಯಕ್ರಮಗಳನ್ನು ನಡೆಸಲಾಗುತ್ತಿದೆ.

ಹಾಸನ ಮತ್ತು ಬೆಂಗಳೂರು (ಗ್ರಾಮಾಂತರ) ಜಿಲ್ಲೆಗಳಲ್ಲಿ ಒಂದು ವರ್ಷದೊಳಗಿನ ಮಕ್ಕಳಿಗೆ ಒಂದು ಲಕ್ಷ ಇಂಟರ್ ನ್ಯಾಷನಲ್ ಯೂನಿಟ್‌ಗಳಷ್ಟಿರುವ "ಎ" ಅನ್ನಾಂಗದ ಕ್ಯಾಪ್ಸೂಲ್‌ಗಳನ್ನು ದಢಾರ ಲಸಿಕೆಯೊಂದಿಗೆ ಕೊಡಲಾಗುತ್ತಿದೆ.

### 2) ಸಮಗ್ರ ಬಾಲವಿಕಾಸ ಸೇವೆಗಳ ಯೋಜನೆ.

ಈ ಕಾರ್ಯಕ್ರಮ ಕೆಳಕಂಡ ಸೇವೆಗಳನ್ನೊಳಗೊಂಡಿರುತ್ತದೆ.

ಅ) ಪೂರಕ ಪೌಷ್ಟಿಕ ಆಹಾರ ವಿತರಣೆ.

ಆ) ಲಸಿಕೆ ಕಾರ್ಯಕ್ರಮ.

ಇ) ಆರೋಗ್ಯ ತಪಾಸಣೆ.

ಈ) ಪರಾಮರ್ಶಕ ಸೇವೆಗಳು.

ಉ) ಆರೋಗ್ಯ ಮತ್ತು ಪೌಷ್ಟಿಕ ಆಹಾರ ಶಿಕ್ಷಣ.

ಊ) ಅನೌಪಚಾರಿಕ ಶಾಲಾ ಪೂರ್ವ ಶಿಕ್ಷಣ.

ಅಂಗನವಾಡಿ ಕೇಂದ್ರಗಳಲ್ಲಿ ವಲಯ ಮಟ್ಟದ ತರಬೇತಿ, ನಿರಂತರ ಶಿಕ್ಷಣ, ವೈದ್ಯಾಧಿಕಾರಿಗಳ ತರಬೇತಿ. ಶೇ 100 ರಷ್ಟು ಲಸಿಕೆ ಕಾರ್ಯಕ್ರಮದ ಪ್ರಗತಿ, ಪರಾಮರ್ಶಕ ಸೇವೆ, ಆರೋಗ್ಯ ತಪಾಸಣೆ ಮುಂತಾದ ಕಾರ್ಯಕ್ರಮಗಳನ್ನು ನಡೆಸುವುದು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಜವಾಬ್ದಾರಿಯಾಗಿದೆ, ಇದುವರೆವಿಗೂ ರಾಜ್ಯದಲ್ಲಿ 142 ಪ್ರಾಜೆಕ್ಟ್‌ಗಳು ಮಂಜೂರಾಗಿದ್ದು. 131 ಪ್ರಾಜೆಕ್ಟ್‌ಗಳಲ್ಲಿ ಈ ಕಾರ್ಯಕ್ರಮವನ್ನು ಕಾರ್ಯಗತಗೊಳಿಸಲಾಗಿದೆ.

## ವಲಯ ತರಬೇತಿ ಕಾರ್ಯಕ್ರಮ

### ಸೆಪ್ಟೆಂಬರ್ 1992ರ ಅಂತ್ಯದವರೆಗಿನ ಪ್ರಗತಿ

| ತ್ರೈಮಾಸಿಕ. | ಗುರಿ, | ಸಾಧನೆ. | ಶೇಕಡಾವಾರು. |
|---|---|---|---|
| 1) | 3651 | 1999 | 54.75 |
| 2) | 3651 | 2514 | 68.86 |
| | ಅಂಗನವಾಡಿ ಕೇಂದ್ರಗಳಿಗೆ ವೈದ್ಯಾಧಿಕಾರಿಗಳ ಭೇಟಿ | | |
| 1 | 23875 | 11086 | 46.43 |
| 2 | 23875 | 13797 | 57.79 |

### ಲಸಿಕೆ ಕಾರ್ಯಕ್ರಮದ ಪ್ರಗತಿ

| ಲಸಿಕೆ | ಗುರಿ. | ಸಾಧನೆ. | ಶೇಕಡಾವಾರು. |
|---|---|---|---|
| ಬಿ.ಸಿ.ಜಿ. | 809280 | 263607 | 32.[illegible]7 |
| ಡಿ.ಪಿ.ಟಿ. | 809280 | 212221 | 26.22 |
| ಪೋಲಿಯೋ | 809280 | 221966 | 27.43 |
| ದಡಾರ | 809280 | 208139 | 25.72 |
| ಟಿ.ಟಿ. (ತಾಯಿ) | 872024 | 262451 | 30.10 |

## 2. ತರಬೇತಿ ಕಾರ್ಯಕ್ರಮ

ಸಮಗ್ರ ಬಾಲ ವಿಕಾಸ ಸೇವೆಗಳ ಯೋಜನೆಯ ಸಲಹೆಗಾರರು 5 ತರಬೇತಿ ಕಾರ್ಯಕ್ರಮಗಳನ್ನು ಏರ್ಪಡಿಸಿದ್ದು. 98 ವೈದ್ಯಾಧಿಕಾರಿಗಳು ಹಾಗೂ 10 ಬಾಲವಿಕಾಸ ಯೋಜನಾಧಿಕಾರಿಗಳು ತರಬೇತಿಯನ್ನು ಪಡೆದಿದ್ದಾರೆ.

ಬಾಲವಿಕಾಸ ಯೋಜನೆಯ ಪ್ರಗತಿಯನ್ನು ಪರಿಶೀಲಿಸಲು ಮೂರು ವಿಭಾಗೀಯ ಮಟ್ಟದ ಸಭೆಗಳನ್ನು ನಡೆಸಲಾಗಿದೆ.

## 3. ರಾಷ್ಟ್ರೀಯ ಗಳಗಂಡ ರೋಗ ನಿಯಂತ್ರಣ ಕಾರ್ಯಕ್ರಮ

92ನೇ ಸೆಪ್ಟೆಂಬರ್ ತಿಂಗಳಲ್ಲಿ ಭಾರತ ಸರ್ಕಾರದ ತಂಡವು ರಾಜ್ಯಕ್ಕೆ ಭೇಟಿ ನೀಡಿ ಬೆಂಗಳೂರು ನಗರದಲ್ಲಿ ಗಳಗಂಡ ರೋಗದ ಸಮೀಕ್ಷೆ ನಡೆಸಿತು. ಸಮೀಕ್ಷೆಯ ವರದಿ ಭಾರತ ಸರ್ಕಾರದಿಂದ ಇನ್ನೂ ಬರಬೇಕಾಗಿದೆ.

ರಾಷ್ಟ್ರೀಯ ಗಳಗಂಡ ರೋಗ ನಿವಾರಣೆಯ ಪ್ರಗತಿಯ ಪರಿಶೀಲನೆಗಾಗಿ ದಿನಾಂಕ 25-8-92 ರಂದು 5ನೇ ರಾಜ್ಯ ಮಟ್ಟದ ಸಮನ್ವಯ ಸಮಿತಿಯ ಸಭೆ ಸಮಾವೇಶಗೊಂಡಿತ್ತು. 92ರ ಮಾರ್ಚ್‌ನಲ್ಲಿ ಉತ್ತರ ಕನ್ನಡ, ದಕ್ಷಿಣ ಕನ್ನಡ ಮತ್ತು ಕೊಡಗು ಜಿಲ್ಲೆಗಳಲ್ಲಿ ಅಯೋಡಿನ್ ಯುಕ್ತವಲ್ಲದ ಉಪ್ಪಿನ ಮಾರಾಟವನ್ನು ನಿಷೇಧಿಸಲು ಅಧಿಸೂಚನೆ ಹೊರಡಿಸಲಾಗಿದೆ.

ಅಯೋಡಿನ್ ಯುಕ್ತವಲ್ಲದ ಉಪ್ಪನ್ನು ನಿಷೇಧಿಸಿರುವ ಜಿಲ್ಲೆಗಳಿಗೆ ಅಯೋಡಿನ್ ಯುಕ್ತ ಉಪ್ಪನ್ನು ನಿರಂತರವಾಗಿ ಸರಬರಾಜು ಮಾಡುವಂತೆ ಆಹಾರ ಮತ್ತು ನಾಗರಿಕ ಪೂರೈಕೆಗಳ ನಿರ್ದೇಶಕರನ್ನು ಮತ್ತು ರಾಜ್ಯ ಆಹಾರ ಮತ್ತು ನಾಗರೀಕ ಪೂರೈಕೆ ವ್ಯವಸ್ಥಾಪಕ ನಿರ್ದೇಶಕರನ್ನು ಕೋರಲಾಗಿದೆ.

ಚಿಕ್ಕಮಗಳೂರು ಜಿಲ್ಲೆಯಲ್ಲಿ ಅಯೋಡಿನ್ ಯುಕ್ತ ಉಪ್ಪಿನ ಗುಣಮಟ್ಟ ಪರೀಕ್ಷೆಗಾಗಿ ಇನ್ನೂ ನೂರು ಫೀಲ್ಡ್ ಕಿಟ್‌ಗಳನ್ನು ಒದಗಿಸಲಾಗಿದೆ.

ಭಾರತ ಸರ್ಕಾರವು 92–93ನೇ ಸಾಲಿಗೆ ರಾಷ್ಟ್ರೀಯ ಅಯೋಡಿನ್ ಕೊರತೆಯಿಂದುಂಟಾಗುವ ರೋಗಗಳ ನಿಯಂತ್ರಣ ಕಾರ್ಯಕ್ರಮಕ್ಕೆ 1.5 ಲಕ್ಷ ರೂಪಾಯಿಗಳನ್ನು ಒದಗಿಸಿದೆ. 92ನೇ ನವೆಂಬರ್ ಅಂತ್ಯದವರೆಗೆ 1,16,672 ರೂ.ಗಳನ್ನು ಖರ್ಚು ಮಾಡಲಾಗಿದೆ.

ಅಯೋಡಿನ್ ಕೊರತೆಯಿಂದುಂಟಾಗುವ ನ್ಯೂನತೆಗಳ ಬಗ್ಗೆ 1000 ಫ್ಲಿಪ್ ಪುಸ್ತಕಗಳನ್ನು ಕನ್ನಡದಲ್ಲಿ ಮುದ್ರಿಸಿ ಹಂಚಲಾಗುತ್ತಿದೆ. ಗಳಗಂಡ ರೋಗ ಕುರಿತ ಭಿತ್ತಿ ಪತ್ರಗಳನ್ನು ಮುದ್ರಿಸುವ ವ್ಯವಸ್ಥೆ ಮಾಡಲಾಗುತ್ತಿದೆ.

## 4. ತರಬೇತಿಯನ್ನೊಳಗೊಂಡಂತೆ ಪೌಷ್ಟಿಕ ಆಹಾರ ಶಿಕ್ಷಣ ಚಟುವಟಿಕೆಗಳು

'ಎ' ಅನ್ನಾಂಗ ಮತ್ತು ಅಪೌಷ್ಟಿಕತೆಯುಂಟಾಗುವ ರಕ್ತಹೀನತೆಯನ್ನು ಕುರಿತು ಎರಡು ಬಗೆಯ ಪ್ಲಾಪ್ ಕಾರ್ಡ್‌ಗಳನ್ನು ಹೊರತರಲಾಗಿದ್ದು, ಸಂಬಂಧಿಸಿದವರಿಗೆ ಹಂಚಿಕೆ ಮಾಡಲಾಗುತ್ತಿದೆ. "ಪೌಷ್ಟಿಕ ಆಹಾರದ ಮಹತ್ವ ಕುರಿತ ಒಂದು ಫ್ಲಿಪ್ ಪುಸ್ತಕವನ್ನು ಹೊರತರಲಾಗಿದ್ದು, ಅವುಗಳನ್ನು ಹಂಚಲಾಗುತ್ತಿದೆ. ಪೌಷ್ಟಿಕ ಆಹಾರ ಕುರಿತು 4 ಭಿತ್ತಿ ಪತ್ರಗಳನ್ನು ಹೊರತರಲು ಕ್ರಮ ಕೈಗೊಳ್ಳಲಾಗಿದೆ.

"ಉತ್ತಮ ರೀತಿಯ ಶಿಶು ಆಹಾರ ಅಭ್ಯಾಸಗಳು'' ಎಂಬ ವಿಷಯ ಕುರಿತಂತೆ ಯುನಿಸೆಫ್ ಸಹಯೋಗದೊಂದಿಗೆ ಎರಡು ಕಾರ್ಯಾಗಾರಗಳನ್ನು, ರಾಜ್ಯ ಮಟ್ಟದಲ್ಲಿ (ಬೆಂಗಳೂರಿನಲ್ಲಿ), ಮತ್ತು ವಿಭಾಗೀಯ ಮಟ್ಟದಲ್ಲಿ (ಬೆಂಗಳೂರು ವಿಭಾಗದಲ್ಲಿ) ಏರ್ಪಡಿಸಲಾಗಿದ್ದಿತು.

ಪೌಷ್ಟಿಕ ಆಹಾರ ವಿಭಾಗವು ಪೌಷ್ಟಿಕ ಆಹಾರ ಮತ್ತು ಗಳಗಂಡ ರೋಗದ ವಿಷಯಕ್ಕೆ ಸಂಬಂಧಿಸಿದಂತೆ ದೂರದರ್ಶನ ಮತ್ತು ರೇಡಿಯೋ ಕಾರ್ಯಕ್ರಮಗಳಲ್ಲಿ ಭಾಗವಹಿಸಿದೆ. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ತರಬೇತಿ ಕೇಂದ್ರ, ಸಾರ್ವಜನಿಕ ಸಹಕಾರ ಮತ್ತು ಶಿಶು ಅಭಿವೃದ್ಧಿಯ ರಾಷ್ಟ್ರೀಯ ಸಂಸ್ಥೆ ಮತ್ತು ಸಮಗ್ರ ಬಾಲ ವಿಕಾಸ ಯೋಜನೆಯ ಸಲಹೆಗಾರರು ನಡೆಸುವ ತರಬೇತಿ ಕಾರ್ಯಕ್ರಮಗಳಲ್ಲಿ ಪೌಷ್ಟಿಕ ಆಹಾರ ವಿಭಾಗವು ಭಾಗವಹಿಸಿದ್ದಿತು. ಕರ್ನಾಟಕ ರಾಜ್ಯದಲ್ಲಿ ಕುಶಲ ಕರ್ಮಿಗಳ ಆಹಾರ ಪದ್ಧತಿ ಮತ್ತು ಕರ್ನಾಟಕದಲ್ಲಿ ಗಳಗಂಡ ರೋಗ ಕುರಿತಂತೆ ಎರಡು ವೈಜ್ಞಾನಿಕ ವರದಿಗಳನ್ನು ಹೈದರಾಬಾದಿನಲ್ಲಿ ನಡೆದ ಪೌಷ್ಟಿಕ ಆಹಾರ ಸಂಸ್ಥೆಯ ಸಭೆಗೆ ಕಳುಹಿಸಲಾಗಿದ್ದು ಅವುಗಳು ಅಂಗೀಕರಿಸಲ್ಪಟ್ಟಿದೆ.

ಬೆಂಗಳೂರು ವಿಭಾಗದ ಐದು ಜಿಲ್ಲಾ ಕೇಂದ್ರ ಸ್ಥಾನಗಳಲ್ಲಿ ಅಂದರೆ ಬೆಂಗಳೂರು (ಗ್ರಾಮಾಂತರ) ಕೋಲಾರ, ಶಿವಮೊಗ್ಗ, ಚಿತ್ರದುರ್ಗ, ತುಮಕೂರುಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಪೌಷ್ಟಿಕ ಆಹಾರ ಮತ್ತು ಪ್ರಾತ್ಯಕ್ಷಿಕ ಘಟಕಗಳು 92–93ನೇ ಸಾಲಿನಲ್ಲಿ (ಅಕ್ಟೋಬರ್ 92ರ ಅಂತ್ಯದವರೆಗೆ) 524 ಅಡಿಗೆ ಪ್ರಾತ್ಯಕ್ಷಿಕಗಳು. 685 ಗುಂಪು ಸಭೆಗಳು, 310 ಚಲನಚಿತ್ರ ಪ್ರದರ್ಶನಗಳು ಮತ್ತು 315 ವಸ್ತು ಪ್ರದರ್ಶನಗಳನ್ನು ಏರ್ಪಡಿಸಿದ್ದವು.

## 5) ರಾಷ್ಟ್ರೀಯ ಪೌಷ್ಟಿಕ ಆಹಾರ ಸಮೀಕ್ಷಣ ತಂಡದಿಂದ ನಡೆಯುವ ನಿರಂತರ ಪೌಷ್ಟಿಕ ಆಹಾರ ಸಮೀಕ್ಷೆ

ರಾಷ್ಟ್ರೀಯ ಪೌಷ್ಟಿಕಾಹಾರ ಸಮೀಕ್ಷಾ ತಂಡವು ಪೌಷ್ಟಿಕ ಆಹಾರ ವಿಭಾಗಕ್ಕೆ ಹೊಂದಿಕೊಂಡು ಕಾರ್ಯನಿರ್ವಹಿಸುತ್ತಿದೆ. ಈ ತಂಡವು ಹಾಸನ ಮತ್ತು ಮೈಸೂರು ಜಿಲ್ಲೆಯ ವಿವಿಧ ತಾಲ್ಲೂಕುಗಳಲ್ಲಿ ಎ ಅನ್ನಾಂಗ ಸಮೀಕ್ಷೆಯನ್ನು ನಡೆಸುತ್ತಿದೆ. ಚಿಕ್ಕಮಗಳೂರು ಜಿಲ್ಲೆಯ ವಿವಿಧ ತಾಲ್ಲೂಕುಗಳಲ್ಲಿ ಆರೋಗ್ಯ ಸೌಲಭ್ಯ ಕುರಿತ ಸಮೀಕ್ಷೆಯನ್ನು ನಡೆಸಲಾಗಿದೆ. ಮಧ್ಯಾಹ್ನ ಉಪಹಾರ ಕುರಿತ ಮೌಲ್ಯ ಮಾಪನ-ಕಾರ್ಯವು ಪ್ರಗತಿಯಲ್ಲಿದೆ.

## ಮಾನಸಿಕ ಆರೋಗ್ಯ ಕಾರ್ಯಕ್ರಮ

ರಾಜ್ಯದಲ್ಲಿ ಮಾನಸಿಕ ಆರೋಗ್ಯ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಪ್ರಾರಂಭಿಕವಾಗಿ, ಬಳ್ಳಾರಿ ಜಿಲ್ಲೆಯನ್ನು ಆಯ್ಕೆ ಮಾಡಿ, ಈ ಕಾರ್ಯಕ್ರಮವನ್ನು 1985– 6ರಲ್ಲಿ ಅನುಷ್ಠಾನ

ಳಿಸಲಾಯಿತು. ಈ ಕಾರ್ಯಕ್ರಮವನ್ನು ಈ ಜಿಲ್ಲೆಯಲ್ಲಿ ಅನುಷ್ಠಾನಗೊಳಿಸಿದ ಬಗ್ಗೆ ತೃಪ್ತಿ ಂದಿ. ಬಿಜಾಪುರ, ಚಿತ್ರದುರ್ಗ, ಕೋಲಾರ, ದಕ್ಷಿಣ ಕನ್ನಡ, ಧಾರವಾಡ ಹಾಗೂ ಚಿಕ್ಕಮಗಳೂರು ಲ್ಲೆಗಳಿಗೆ ವಿಸ್ತರಿಸಿ ಅನುಷ್ಠಾನಗೊಳಿಸಲು ಸರ್ಕಾರದ ಆದೇಶ ಸಂಖ್ಯೆ ಆಕುಕ : 49 : ಪಿಟಿಬಿ : 91. ನಾಂಕ 15-2-92ರಲ್ಲಿ ಆದೇಶಿಸಲಾಯಿತು.

ಈ ಸಾಲಿನಲ್ಲಿ ಮಾನಸಿಕ ಆರೋಗ್ಯ ಕಾರ್ಯಕ್ರಮದ ತರಬೇತಿಗಾಗಿ ವೈದ್ಯಾಧಿಕಾರಿಗಳನ್ನು ಷ್ಟ್ರೀಯ ಮಾನಸಿಕ ಆರೋಗ್ಯ ಮತ್ತು ನರವಿಜ್ಞಾನ ಸಂಸ್ಥೆಗೆ ನಿಯೋಜಿಸಿದ್ದು, 3 ದ್ಯಾಧಿಕಾರಿಗಳು ತರಬೇತಿ ಹೊಂದಿರುವುದಾಗಿ ತಿಳಿದುಬಂದಿದೆ.

## ಶುಶ್ರೂಷಾ ಕಾರ್ಯಕ್ರಮ

ಕರ್ನಾಟಕ ಸರ್ಕಾರವು ರಾಜ್ಯದ ಎಲ್ಲಾ ನಾಗರೀಕರಿಗೂ ಆರು ತಿಂಗಳಿಗೊಮ್ಮೆ ಉಚಿತ ವೈದ್ಯಕೀಯ ಪಾಸಣೆ ಅವಕಾಶವನ್ನು ಒದಗಿಸಿಕೊಡುವ "ಶುಶ್ರೂಷಾ" ಎಂಬ ಕಾರ್ಯಕ್ರಮವನ್ನು 1992-93ನೇ ಲಿಗೆ ವಿಸ್ತರಿಸಿದೆ.

ಈ ಉಚಿತ ವೈದ್ಯಕೀಯ ತಪಾಸಣೆಯಲ್ಲಿನ ರಾಜ್ಯದಲ್ಲಿನ ಪ್ರತಿಯೊಬ್ಬ ಪ್ರಜೆಗೂ ಅದರಲ್ಲೂ ಮುಖ್ಯವಾಗಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರು ಹೆಚ್ಚಾಗಿ ವಾಸಿಸುವ ಪ್ರದೇಶ, ಳಚೆ ಪ್ರದೇಶ ಮತ್ತು ಆರ್ಥಿಕವಾಗಿ ಹಿಂದುಳಿದವರು ವಾಸಿಸುವ ಪ್ರದೇಶಗಳಲ್ಲಿ ಸಂಪೂರ್ಣ ದ್ಯಕೀಯ ಪರೀಕ್ಷೆ ಮಾಡಿಸಿಕೊಳ್ಳುವ ಅವಕಾಶವನ್ನು ಕಲ್ಪಿಸುವುದು ಈ ಯೋಜನೆಯ ಉದ್ದೇಶ ಗಿರುತ್ತದೆ.

ಈ ವೈದ್ಯಕೀಯ ತಪಾಸಣೆಯಲ್ಲಿ ಕೆಳಗೆ ತಿಳಿಸಿರುವ ಪರೀಕ್ಷೆಗಳನ್ನು ಅಳವಡಿಸಲಾಗಿದೆ.

1) ಭೌತಿಕ ಪರೀಕ್ಷೆ : ನಾಡಿ ಮಿಡಿತ, ರಕ್ತದ ಒತ್ತಡ, ಕಣ್ಣು, ಕಿವಿ, ಮೂಗು ಹಲ್ಲು, ನಾಲಿಗೆ, ಚರ್ಮದ ರೋಗಗಳು, ನ್ಯೂನತೆಗಳು ಇತ್ಯಾದಿ.

2) ದೇಹಕ್ಕೆ ಸಂಬಂಧಿಸಿದ ಪರೀಕ್ಷೆ : ಅದರಲ್ಲಿ ಹೃದಯ ಪರೀಕ್ಷೆ, ಶ್ವಾಸಕೋಶ ಪರೀಕ್ಷೆ, ನಾಡಿ ಪರೀಕ್ಷೆ, ಉದರ ಪರೀಕ್ಷೆ ಇತ್ಯಾದಿ ಹಾಗೂ

3) ಸರಳ ಪ್ರಯೋಗ ಶಾಲಾ ಪರೀಕ್ಷೆ : ಮಲ, ಮೂತ್ರ, ರಕ್ತ ಇತ್ಯಾದಿ

ಕಾಯಿಲೆ ಹಾಗೂ ನ್ಯೂನತೆಗಳನ್ನು ಪ್ರಾರಂಭಿಕ ಹಂತದಲ್ಲಿಯೇ ತಿಳಿಯಲು ಮೇಲ್ಕಂಡ ರೀಕ್ಷೆಗಳನ್ನು ನಡೆಸಲಾಗುವುದು.

ಸರ್ಕಾರಿ ಆದೇಶದ ಸಂಖ್ಯೆ : ಆಕುಕ 227 ಆಯೋಸಂ 92, ದಿನಾಂಕ 12-5-92ರಲ್ಲಿ 992-93ನೇ ಸಾಲಿನಲ್ಲಿ 'ಶುಶ್ರೂಷ' ಕಾರ್ಯಕ್ರಮವನ್ನು ವಿಸ್ತರಿಸಲು ಮಂಜೂರಾತಿಯನ್ನು ಡಲಾಗಿದೆ.

ಈ ಯೋಜನೆಯನ್ನು ಪರಿಣಾಮಕಾರಿಯಾಗಿ ಜಾರಿಗೆ ತರಲು ಜಿಲ್ಲಾ ಮಟ್ಟದ ಸಮಿತಿಗಳನ್ನು ಚಿಸಲಾಗಿದ್ದು, ಇದರಲ್ಲಿ ಆಯಾ ಜಿಲ್ಲೆಯ ಜಿಲ್ಲಾಧಿಕಾರಿಯವರು ಅಧ್ಯಕ್ಷರಾಗಿದ್ದು, ಇತರ [illegible] ಜನ ಸದಸ್ಯರುಗಳು ಇರುತ್ತಾರೆ.

ಕಾರ್ಯಕ್ರಮದ ಉಸ್ತುವಾರಿಗೆ ಈ ಕೆಳಗಿನ ಸದಸ್ಯರನ್ನೊಳಗೊಂಡಂತೆ ಒಂದು ಸಮಿತಿ ಇರುತ್ತದೆ.

| | | | |
|---|---|---|---|
| 1) | ಜಿಲ್ಲಾಧಿಕಾರಿ | ... | ಅಧ್ಯಕ್ಷರು |
| 2) | ಜಿಲ್ಲಾ ಶಸ್ತ್ರಚಿಕಿತ್ಸಕರು | ... | ಸದಸ್ಯರು |
| 3) | ಸ್ಥಳೀಯ ವೈದ್ಯಕೀಯ ಮಹಾ ವಿದ್ಯಾಲಯ | ... | ಸದಸ್ಯರು |
| | ಪ್ರಾಂಶುಪಾಲರು (ಇದ್ದಲ್ಲಿ) | ... | ಸದಸ್ಯರು |
| 4) | ನಗರಸಭೆ : ಪೌರಸಭೆ ವೈದ್ಯಾಧಿಕಾರಿ | ... | ಸದಸ್ಯರು |
| 5) | ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ | ... | ಸದಸ್ಯರು |
| 6) | ಜಿಲ್ಲಾ ವಾರ್ತಾ ಮತ್ತು ಪ್ರಕಟಣಾಧಿಕಾರಿ | ... | ಸದಸ್ಯರು |
| 7) | ಜಿಲ್ಲಾ ಭಾರತೀಯ ವೈದ್ಯಕೀಯ ಸಂಘದ ಪ್ರತಿನಿಧಿ | .. | ಸದಸ್ಯರು |
| 8) | ಸ್ವಯಂ ಸೇವಾ ಸಂಸ್ಥೆಗಳ ಪ್ರತಿನಿಧಿ (ಅಧ್ಯಕ್ಷರಿಂದ ನಾಮಕರಣ ಮಾಡಿದವರು) | ... | ಸದಸ್ಯರು |
| 9) | ಮಹಿಳೆಯರ ಮತ್ತು ಮಕ್ಕಳ ಕಲ್ಯಾಣ ಇಲಾಖೆಯ ಸಹಾಯಕ ನಿರ್ದೇಶಕರು | ... | ಸದಸ್ಯರು |
| 10) | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿ | ... | ಸದಸ್ಯ ಕಾರ್ಯದರ್ಶಿ |

ಈ ಯೋಜನೆಯ ಪ್ರಕಾರ, ಆರೋಗ್ಯ ತಪಾಸಣೆಯ ಕಾಲದಲ್ಲಿ ಪರೀಕ್ಷಿಸಿದವರಲ್ಲಿ ಯಾರಿಗಾದರು ಹೆಚ್ಚಿನ ಪರೀಕ್ಷೆ ಹಾಗೂ ಚಿಕಿತ್ಸೆ ಏನಾದರೂ ಬೇಕಾಗಿ ಕಂಡುಬಂದಲ್ಲಿ, ಅಂತಹವರುಗಳನ್ನು ಸೌಕರ್ಯ ವಿರುವ ಸೂಕ್ತ ಆಸ್ಪತ್ರೆಗಳಿಗೆ ಕಳುಹಿಸಲಾಗುತ್ತದೆ.

ಇಂತಹ ಸ್ಥಳಗಳಿಗೆ ಹೋಗಿ ಬರುವ ಸಾರಿಗೆ ವೆಚ್ಚವನ್ನು ಆರ್ಥಿಕವಾಗಿ ಅಶಕ್ತರಾದ ರೋಗಿ ಹಾಗೂ ರೋಗಿಯ ಒಬ್ಬ ಸಂಗಾತಿಗೆ ಒಂದು ಬಾರಿಗೆ ಅನ್ವಯವಾಗುವಂತೆ ವಿತರಣೆ ಮಾಡಲಾಗುತ್ತದೆ

ಈ ಯೋಜನೆಯನ್ನು ಜಾರಿಗೆ ತರುವುದಕ್ಕಾಗಿ ಒಂದುಕೋಟಿ ರೂ.ಗಳನ್ನು ನಿಗದಿಗೊಳಿಸಲಾಗಿದೆ ಈ ಹಣದಲ್ಲಿ 20 ಲಕ್ಷ ರೂಪಾಯಿಗಳನ್ನು ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ತಲಾ ಒಂದು ಲಕ್ಷ ರೂಪಾಯಿ ಗಳಂತೆ 1992ರ ಜುಲೈ ತಿಂಗಳಿನಲ್ಲಿ ಬಿಡುಗಡೆ ಮಾಡಲಾಗಿದೆ.

1992ರ ಏಪ್ರಿಲ್ ತಿಂಗಳಿಂದ 1992ರ ನವೆಂಬರ್ ತಿಂಗಳ ಅಂತ್ಯದವರೆಗೆ ಸಾಧಿಸಲಾದ ಪ್ರಗತಿಯು ಈ ಕೆಳಕಂಡಂತೆ ಇರುತ್ತದೆ.

| ಪ್ರಥಮ. ದ್ವಿತೀಯ ಸುತ್ತಿನಲ್ಲಿ ವೈದ್ಯಕೀಯ ತಪಾಸಣೆ ಹೊಂದಿದವರ ಸಂಖ್ಯೆ | ದೊಡ್ಡ ಆಸ್ಪತ್ರೆಗಳಿಗೆ ಕಳುಹಿಸಿದ ಪ್ರಕರಣಗಳ ಸಂಖ್ಯೆ | ವಿಶೇಷ ವೈದ್ಯಕೀಯ ಸಂಸ್ಥೆಗಳಿಗೆ ಕಳುಹಿಸಿದ ಪ್ರಕರಣಗಳು |
|---|---|---|
| 2,80,541 | 15.902 | 3,616 |

## ಸಾರ್ವಜನಿಕ ಆರೋಗ್ಯ ಸಂಸ್ಥೆ, ಬೆಂಗಳೂರು

ಸಾರ್ವಜನಿಕ ಆರೋಗ್ಯ ಸಂಸ್ಥೆಯು ರಾಜ್ಯ ಮಟ್ಟದ ಪ್ರಯೋಗಾಲಯವಾಗಿದ್ದು, ಇದು ಪ್ರಯೋಗಾಲಯದ ಸರಣಿಯಲ್ಲಿ ಒಂದಾಗಿರುತ್ತದೆ. ಈ ಸಂಸ್ಥೆಯು ಕೆಳಕಂಡ ಮುಖ್ಯ 8 ವಿಭಾಗಗಳನ್ನು ಹೊಂದಿದೆ.

1) ಸೂಕ್ಷ್ಮ ಜೀವಾಣು ವಿಭಾಗ
2) ರಾಸಾಯನಿಕ ಪರೀಕ್ಷಕರ ವಿಭಾಗ
3) ಆಹಾರ ವಿಶ್ಲೇಷಣಾ ವಿಭಾಗ
4) ಜಲ ವಿಶ್ಲೇಷಣಾ ವಿಭಾಗ
5) ಹಿರಿಯ ಪ್ರಯೋಗ ಶಾಲಾ ತಂತ್ರಜ್ಞರ ತರಬೇತಿ ವಿಭಾಗ

6) ವಿಭಾಗೀಯ ಆಹಾರ ವಿಶ್ಲೇಷಕರ ಹಾಗೂ ಪ್ರಾಂತೀಯ ಸಹ ರಾಸಾಯನಿಕ ವಿಶ್ಲೇಷಕರ ವಿಭಾಗ
7) ಕೀಟನಾಶಕ ಪ್ರಯೋಗಾಲಯ (ರಾಷ್ಟ್ರೀಯ ಮಲೇರಿಯಾ ನಿರ್ಮೂಲನಾ ಕಾರ್ಯಕ್ರಮದಡಿಯಲ್ಲಿ)
8) ಅಂತರ್ನಾಳ ದ್ರವದ ಗುಣಮಟ್ಟ ನಿಯಂತ್ರಣ ವಿಭಾಗ

1) ಸೂಕ್ಷ್ಮ ಜೀವಾಣು ವಿಭಾಗ.—

ಈ ವಿಭಾಗದ ಉದ್ದೇಶಗಳು ಹೀಗಿವೆ.

1) ರಾಜ್ಯದ ಎಲ್ಲೆಡೆಗೆ ಲಸಿಕೆಯ ಪೂರೈಕೆ
2) ಸೂಕ್ಷ್ಮ ಜೀವಾಣುಗಳಿಂದ ನೀರು ಕಲುಷಿತವಾಗುವುದನ್ನು ತಡೆಗಟ್ಟುವುದು
3) ವಿಬ್ರಿಯೋ ಕಾಲರಾದ ಸೂಕ್ಷಾಣು ಜೀವಿಗಳ ಪತ್ತೆ ಹಚ್ಚುವಿಕೆ ಹಾಗೂ ಇತರ ರೋಗ ನಿದಾನ ಕಾರ್ಯಗಳು

ಈ ವಿಭಾಗದ ಗುರಿ ಮತ್ತು ಸಾಧನೆ

1) ನೀರಿನ ಮಾದರಿಗಳು

| ವಿವರಗಳು | ಏಪ್ರಿಲ್ 1992 ರಿಂದ ನವೆಂಬರ್ 1992ರ ಅಂತ್ಯದವರೆಗೆ |
|---|---|
| 1) ವಿಶ್ಲೇಷಿಸಿದ ಒಟ್ಟು ನೀರಿನ ಮಾದರಿಗಳು | 1194 |
| ಅ) ಒಟ್ಟು ಸಕಾರಾತ್ಮಕ | 735 |
| ಆ) ಒಟ್ಟು ನಕಾರಾತ್ಮಕ | 459 |
| 2) ರಕ್ತ ಪರೀಕ್ಷೆ ಹಾಗೂ ಇತರ ಪರೀಕ್ಷೆಗಳು.— | |
| ಅ) ಮೂತ್ರ ವಿಶ್ಲೇಷಣೆ | 4 |
| ಆ) ಮಲ ಪರೀಕ್ಷೆ | 3 |
| ಇ) ರಕ್ತ ವಿಶ್ಲೇಷಣೆ | 21 |
| ಈ) ರಕ್ತ ವಿಶ್ಲೇಷಣೆ (ವೈಡಾಲ್) | 29 |
| 3) ವಿಬ್ರಿಯೋ ಕಾಲರಾ ಹಾಗೂ ಇತರೆ ವಿಶ್ಲೇಷಣೆಗಳು.— | |
| ಅ) ವಿಬ್ರಿಯೋ ಕಾಲರಾ ರೋಗದ ಬಗ್ಗೆ ಪರೀಕ್ಷಿಸಲು ಪಡೆದ ಮಲಗಳ ಮಾದರಿ | 1292 |
| ಆ) ಸಕಾರಾತ್ಮಕ | 183 |
| ಇ) ನಕಾರಾತ್ಮಕ | 1109 |
| ಈ) ಆಹಾರದ ಮಾದರಿಗಳು | 30 |
| 1) ಸಕಾರಾತ್ಮಕ | 7 |
| 2) ನಕಾರಾತ್ಮಕ | 23 |
| 4) ಇತರ ವಿಶೇಷಣೆಗಳು | |
| ಅ) ರಕ್ತದ ಕಲ್ಚರ್ | 7 |
| ಆ) ಮೂತ್ರದ ಕಲ್ಚರ್ | 1 |
| ಇ) ಓ. ಟಿ. ಸ್ವಾಬ್ | 4 |
| ಈ) ನೀರಿನ ಮಾದರಿಗಳು | 29 |
| ಉ) ಅಂತರರಾಷ್ಟ್ರೀಯ ಪ್ರಯಾಣ ಪತ್ರಗಳು | 4 |

2) ರಾಸಾಯನಿಕರ ಪರೀಕ್ಷಕರ ವಿಭಾಗ.—

ಈ ವಿಭಾಗದ ಉದ್ದೇಶಗಳು ಈ ರೀತಿ ಇವೆ.

1) ಲಂಚ ನಿರೋಧ ಕಾಯಿದೆಯನ್ವಯ ಕಳುಹಿಸುವ ಮಾದರಿಗಳ ವಿಶ್ಲೇಷಣೆಯ ಮೂಲಕ ಲಂಚ ನಿರೋಧ ಕಾಯಿದೆಯು ಯಶಸ್ವಿಯಾಗಿ ಜಾರಿಗೊಳಿಸುವಂತೆ ಸಹಾಯ ಮಾಡುವುದು.

2) ಮಧ್ಯಸಾರಯುಕ್ತ ಔಷಧಿಗಳ ತಯಾರಿಕೆಯ ವಿಶ್ಲೇಷಣೆ ಮಾಡುವುದರ ಮೂಲಕ ಅಬ್ಕಾರಿ ಕಾಯಿದೆಯನ್ವಯ ಸುಂಕ ವಿಧಿಸಲು ಸಹಾಯ ಮಾಡುವುದು. ರಾಜ್ಯ ಅಬ್ಕಾರಿ ಶಾಸನದ ಅಡಿಯಲ್ಲಿ ಮಾದಕ ವಸ್ತುಗಳಲ್ಲಿ ಹಾಗೂ ಔಷಧಿಗಳಲ್ಲಿ ಬಳಸುವ ಮಧ್ಯಸಾರದ ಪ್ರಮಾಣವನ್ನು ನಿರ್ಧರಿಸಲು ಮಾದರಿಗಳನ್ನು ವಿಶ್ಲೇಷಿಸುವುದು.

ಈ ವಿಭಾಗದ ಸಾಧನೆ

| ವಿವರಗಳು | ಏಪ್ರಿಲ್ 1992 ರಿಂದ ನವೆಂಬರ್ 1992ರ ಅಂತ್ಯದವರೆಗೆ |
|---|---|
| 1) ಎಸ್.ಎಂ.ಪಿ. ಮಾದರಿಗಳು | 59 |
| 2) ಲೋಕಾಯುಕ್ತದಿಂದ ಕಳುಹಿಸಿದ ಮಾದರಿಗಳು | 65 |
| 3) ರಕ್ತ ಮತ್ತು ಮೂತ್ರ | 64 |
| 4) ಮಧ್ಯಸಾರದ ಮಾದರಿಗಳು | 8 |

3) ಆಹಾರ ವಿಶ್ಲೇಷಣಾ ವಿಭಾಗ :

ಈ ವಿಭಾಗದ ಉದ್ದೇಶಗಳು ಕೆಳಕಂಡಂತಿವೆ :—

1) ಆಹಾರ ನಿಯಂತ್ರಣ ಕಾಯ್ದೆ (1954)ಯನ್ನು ಪರಿಣಾಮಕಾರಿಯಾಗಿ ಕಾರ್ಯಗತಗೊಳಿಸಲು ಆಹಾರದ ಗುಣಮಟ್ಟವನ್ನು ಆಹಾರ ಮಾದರಿಗಳನ್ನು ವಿಶ್ಲೇಷಿಸುವುದರ ಮೂಲಕ ಸಹಾಯ ಮಾಡುವುದು.

2) ಆಹಾರ ನಿಯಂತ್ರಣ ಕಾಯ್ದೆ ಮತ್ತು ನಿಯಮಗಳ ಅನುಷ್ಠಾನಗೊಳಿಸುವುದಕ್ಕೆ ಸಂಬಂಧಿಸಿದ ಕಾರ್ಯ ಚಟುವಟಿಕೆಗಳನ್ನು ನೋಡಿಕೊಳ್ಳುವುದು.

ಈ ವಿಭಾಗದಲ್ಲಿ ಆಹಾರ ಕಲಬೆರಕೆ ನಿಯಂತ್ರಣ ಕಾಯ್ದೆ (1954)ಗನುಗುಣವಾಗಿ ಪದವೀಧರರಿಗೆ ಆಹಾರ ಪರಿವೀಕ್ಷಕ ತರಬೇತಿಯನ್ನು ನೀಡಲಾಗುತ್ತದೆ. ಆಹಾರ ಕಲಬೆರಕೆ ಹಾಗೂ ಆರೋಗ್ಯದ ಮೇಲೆ ಆದರ ಹಾನಿಕಾರಕ ಪ್ರಭಾವಗಳ ಬಗ್ಗೆ ಗ್ರಾಹಕರಲ್ಲಿ ಜಾಗೃತಿ ಮೂಡಿಸಲು ಆಗಾಗ್ಗೆ ವಸ್ತು ಪ್ರದರ್ಶನಗಳು ಮತ್ತು ಪ್ರಾತ್ಯಕ್ಷಿಕೆಗಳನ್ನು ನಡೆಸಲಾಗುತ್ತದೆ. ರಾಜ್ಯ ಮಟ್ಟದಲ್ಲಿರುವ ಜಾಗೃತ ದಳವು ಆಹಾರ ಕಲಬೆರಕೆ ಕಾಯ್ದೆಗೆ ಸಂಬಂಧಿಸಿದಂತೆ ಅರಿವು ಮೂಡಿಸಲು ಗ್ರಾಹಕರಿಗೆ ಶಿಕ್ಷಣ ನೀಡುತ್ತದೆ ಮತ್ತು ಪ್ರಚಾರ ನೀಡುತ್ತದೆ.

ಈ ವಿಭಾಗದ ಸಾಧನೆ

| ವಿವರಗಳು | ಏಪ್ರಿಲ್ 1992 ರಿಂದ ನವೆಂಬರ್ 1992ರ ಅಂತ್ಯದವರೆಗೆ |
|---|---|
| 1) ವಿಶ್ಲೇಷಿಸಿದ ಆಹಾರದ ಮಾದರಿಗಳು (ಆಹಾರ ಕಲಬೆರಕೆ ಕಾಯ್ದೆಯಡಿಯಲ್ಲಿ) | 1010 |
| 2) ಇತರ ಆಹಾರ ಮಾದರಿಗಳು | 291 |

4) ಜಲ ವಿಶ್ಲೇಷಣಾ ವಿಭಾಗ

ಈ ವಿಭಾಗದ ಉದ್ದೇಶಗಳು ಹೀಗಿವೆ:—

1) ಜಲ ವಿಶ್ಲೇಷಣೆ ಮಾಡುವುದರ ಮೂಲಕ ನೀರಿನ ಮಾದರಿಗಳಲ್ಲಿರುವ ರಾಸಾಯನಿಕ ವಸ್ತುಗಳ ಮತ್ತು ಮಾಲಿನತೆಗಳನ್ನು ತಡೆಗಟ್ಟುವುದು.

2) ಕೈಗಾರಿಕೆಗಳಿಂದ ಹೊರದೂಡಲ್ಪಟ್ಟ ಕಲುಷಿತ ನೀರು ಹಾಗೂ ಹೊಗೆ ಇತ್ಯಾದಿಗಳ ವಿಶ್ಲೇಷಣೆ ಮಾಡುವುದರ ಮೂಲಕ ಜಲ ಮಾಲಿನ್ಯ (ಮುಂಜಾಗರೂಕತೆ ಮತ್ತು ನಿಯಂತ್ರಣ) ಕಾಯ್ದೆ 1974 ಹಾಗೂ ವಾಯು ಮಾಲಿನ್ಯ (ಮುಂಜಾಗರೂಕತೆ ಮತ್ತು ನಿಯಂತ್ರಣ) ಕಾಯ್ದೆ 1981 ಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಸಹಾಯ ಮಾಡುವುದು.

ಈ ವಿಭಾಗದ ಸಾಧನೆ :—

| ವಿವರಗಳು | ಏಪ್ರಿಲ್ 92ರಿಂದ ನವೆಂಬರ್ 1992ರ ಅಂತ್ಯದವರೆಗೆ |
|---|---|
| 1) ಚರಂಡಿ ನೀರಿನ ಮಾದರಿಗಳು | 898 |
| 2) ಜಲ ಮಾಲಿನ್ಯ ನಿಯಂತ್ರಣ 1974ರ ಅನ್ವಯ ಕಳುಹಿಸಲಾದ ನೀರಿನ ಮಾದರಿಗಳ ಮತ್ತು ವಾಯು ಮಾಲಿನ್ಯ ನಿಯಂತ್ರಣ 1981ರನ್ವಯ ಕಳುಹಿಸಲಾದ ಮಾದರಿಗಳ ವಿಶ್ಲೇಷಣೆ ನಡೆಸಿದ್ದು | 16 |

5. ಹಿರಿಯ ಪ್ರಯೋಗಶಾಲಾ ತಂತ್ರಜ್ಞರ ವಿಭಾಗ:—

ಕಿರಿಯ ಪ್ರಯೋಗಶಾಲಾ ತಂತ್ರಜ್ಞರಿಗೆ ತರಬೇತಿಯನ್ನು ನೀಡುವ ಮೂಲಕ ಪ್ರಯೋಗಾಲಯದ ಕೆಲಸ ಕಾರ್ಯಗಳನ್ನು ಉತ್ತಮ ಪಡಿಸುವುದು ಈ ವಿಭಾಗದ ಉದ್ದೇಶವಾಗಿದೆ.

6) ವಿಭಾಗೀಯ ಆಹಾರ ವಿಶ್ಲೇಷಕರ ಹಾಗೂ ಪ್ರಾಂತೀಯ ಸಹಾಯಕ ರಾಸಾಯನಿಕ ವಿಶ್ಲೇಷಕರ ವಿಭಾಗ:—

ಈ ವಿಭಾಗದ ಉದ್ದೇಶಗಳು ಕೆಳಕಂಡಂತಿವೆ:—

1) ವಿತರಣೆ ಮಾಡುವ ಮದ್ಯಗಳ ಗುಣಮಟ್ಟದ ಪರೀಕ್ಷೆ ನಡೆಸುವುದು,

2) ವಿಷಯುಕ್ತ ಮದ್ಯಗಳ ಪರೀಕ್ಷೆ ನಡೆಸುವುದು

3) ಆಹಾರ ನಿಯಂತ್ರಣ ಕಾಯ್ದೆ (1954)ಯನ್ವಯ ಆಹಾರ ಮಾದರಿಗಳ ವಿಶ್ಲೇಷಣೆ ನಡೆಸುವುದು.

ಈ ವಿಭಾಗದ ಸಾಧನೆ:—

| ವಿವರಗಳು | ಏಪ್ರಿಲ್ 1992ರಿಂದ ನವೆಂಬರ್ 1992ರ ಅಂತ್ಯದವರೆಗೆ |
|---|---|
| 1) ಆಹಾರ ಮಾದರಿಗಳ ವಿಶ್ಲೇಷಣೆ ಮಾಡಿದ್ದು | 122 |
| 2) ಕಲಬೆರಕೆಯಿಂದ ಕೂಡಿದ ಮಾದರಿಗಳ ಸಂಖ್ಯೆ | 6 |

7) ಕೀಟನಾಶಕ ಪ್ರಯೋಗಾಲಯ (ರಾಷ್ಟ್ರೀಯ ಮಲೇರಿಯಾ ನಿರ್ಮೂಲನಾ ಕಾರ್ಯಕ್ರಮ):—

ರಾಷ್ಟ್ರೀಯ ಮಲೇರಿಯಾ ನಿರ್ಮೂಲನಾ ಕಾರ್ಯಕ್ರಮದಲ್ಲಿ ಸಿಂಪಡಿಸಲು ಬಳಸುವ ಕೀಟನಾಶಕಗಳ ಪರಿಣಾಮಕಾರಿತ್ವವನ್ನು ವಿಶ್ಲೇಷಣೆಯ ಮೂಲಕ ನಿರ್ಧರಿಸುವುದು.

ರಾಷ್ಟ್ರೀಯ ಮಲೇರಿಯಾ ನಿರ್ಮೂಲನಾ ಕಾರ್ಯಕ್ರಮದಲ್ಲಿ ಒದಗಿಸಲಾದ ಕೀಟನಾಶಕಗಳ ಮಾದರಿಯನ್ನು ಕೀಟನಾಶಕ ಪರಿವೀಕ್ಷಕರು ಸಂಗ್ರಹಿಸಿ ಕಳುಹಿಸಿರುತ್ತಾರೆ. ಅವುಗಳನ್ನು ವಿಶ್ಲೇಷಿಸಲಾಗುತ್ತದೆ.

ಕೀಟನಾಶಕ ಪ್ರಯೋಗಾಲಯದ ಸಾಧನೆ.—

| ವಿವರಗಳು | ಏಪ್ರಿಲ್ 1992 ರಿಂದ ನವೆಂಬರ್ 1992ರ ಅಂತ್ಯದವರೆಗೆ |
|---|---|
| 1) ಒಟ್ಟು ಮಾದರಿಗಳು | 103 |
| 2) ಗುಣಮಟ್ಟದೊಳಗಿನ ಮಾದರಿಗಳು | 92 |
| 3) ಸರಿಯಾದ ಗುಣಮಟ್ಟವಿಲ್ಲದ ಮಾದರಿಗಳು | 11 |

8) ಅಂತರ್ನಾಳ ದ್ರವದ ಗುಣಮಟ್ಟ ನಿಯಂತ್ರಣ ವಿಭಾಗ.—

ಆಸ್ಪತ್ರೆಗಳಲ್ಲಿ ಉಪಯೋಗಿಸುವ ಅಂತರ್ನಾಳ ದ್ರವದ ಗುಣಮಟ್ಟದ ವಿಶ್ಲೇಷಣೆಯು ಈ ವಿಭಾಗದಲ್ಲಿ ನಡೆಯುತ್ತದೆ.

ಈ ವಿಭಾಗದ ಸಾಧನೆ.—

ಏಪ್ರಿಲ್ 1992 ರಿಂದ ನವೆಂಬರ್ 1992ರ ಅಂತ್ಯದವರೆಗೆ ವಿಶ್ಲೇಷಿಸಿದ ಮಾದರಿಗಳ ಸಂಖ್ಯೆ : 863

## ಸರ್ಕಾರಿ ಔಷಧಿ ಮಳಿಗೆ, ಬೆಂಗಳೂರು

ಈ ಸರ್ಕಾರಿ ಔಷಧಿ ಮಳಿಗೆಯು ಕೇಂದ್ರ ದಾಸ್ತಾನು ಮಳಿಗೆಯಾಗಿದ್ದು, ಬೆಂಗಳೂರಿನಲ್ಲಿ ಸ್ಥಳೀಕರಿಸಿದೆ.

### ಇದರ ಮುಖ್ಯ ಧ್ಯೇಯೋದ್ದೇಶಗಳು ಈ ರೀತಿಯಾಗಿದೆ

1) ಔಷಧಿಗಳು, ರಾಸಾಯನಿಕಗಳು, ಶಸ್ತ್ರಚಿಕಿತ್ಸೆಯ ಉಪಕರಣಗಳು ಇತ್ಯಾದಿಗಳನ್ನು ಆಯವ್ಯಯ ಮಿತಿಯಲ್ಲಿ ದರಗುತ್ತಿಗೆದಾರರಿಂದ ಸಂಗ್ರಹಿಸುವುದು.

2) ಮೇಲೆ ತಿಳಿಸಿರುವ ಔಷಧಿ ಸಾಮಗ್ರಿಗಳನ್ನು ಇಲಾಖೆಯ ಆಸ್ಪತ್ರೆಗಳು ಮತ್ತು ಪ್ರವಾಹ ಪೀಡಿತ ಪ್ರದೇಶಗಳಿಗೆ ಹಾಗೂ ಬರಗಾಲ ಪೀಡಿತ ಪ್ರದೇಶಗಳಿಗೆ ಮತ್ತು ಸಾಂಕ್ರಾಮಿಕ ರೋಗಿಗಳಿಗಾಗಿ ಪೂರೈಸುವುದು.

### ಈ ಮೂಲ ಉದ್ದೇಶವನ್ನು ಈಡೇರಿಸಲು

1) ದರಗುತ್ತಿಗೆಯನ್ನು ಕರೆಯಲಾಗುವುದು. ಈ ದರಗುತ್ತಿಗೆಯನ್ನು ನಿಗದಿ ಮಾಡಲು ಥೆರೋಪೆಟಿಕ್ ಕಮಿಟಿ, ತಜ್ಞರ ಸಮಿತಿ ಮತ್ತು ಉಚ್ಚಾಧಿಕಾರಿಗಳ ಸಮಿತಿಗಳ ಸಭೆಯನ್ನು ಕರೆದು ಆ ಸಭೆಗಳಲ್ಲಿ ಔಷಧಿಗಳ ಗುಣಮಟ್ಟ ಮತ್ತು ದರಗಳನ್ನು ನಿರ್ಧರಿಸಿ ಸರ್ಕಾರದ ಆಜ್ಞೆಯನ್ನು ಪಡೆದು ದರಗುತ್ತಿಗೆಯನ್ನು ನಿಗದಿಪಡಿಸಲಾಗುವುದು.

2) ಸಂಬಂಧಿಸಿದ ಸಂಸ್ಥೆಗಳಿಗೆ ಔಷಧ ಮುಂತಾದವುಗಳನ್ನು ಸರಬರಾಜು ಮಾಡುವುದು.

ಈ ಸರ್ಕಾರಿ ಔಷಧಿ ಮಳಿಗೆಯಲ್ಲಿ 4 ಸಣ್ಣ ಮಳಿಗೆಗಳಿವೆ

ಅ) ಎ-ಮಳಿಗೆ (ಚುಚ್ಚುಮದ್ದು)

ಚುಚ್ಚುಮದ್ದು ಮತ್ತು ಮುಲಾಮುಗಳನ್ನು ಸಂಗ್ರಹಿಸಿ ಸರಬರಾಜು ಮಾಡಲಾಗುವುದು.

ಆ) ಎ-ಮಳಿಗೆ (ಗುಳಿಗೆ)

ಗುಳಿಗೆಗಳನ್ನು ಮತ್ತು ಕೊಳವೆ ಪಾತ್ರೆಗಳನ್ನು ಸಂಗ್ರಹಿಸಿ ಪೂರೈಸಲಾಗುವುದು.

ಇ) ಬಿ-ಮಳಿಗೆ

ಔಷಧಿ ಪುಡಿಗಳು, ಅಂತರ್ನಾಳ ದ್ರವ, ಮುಲಾಮುಗಳು ಮತ್ತು ಕ್ರಿಮಿನಾಶಕಗಳನ್ನು ಸಂಗ್ರಹಿಸಿ ಸರಬರಾಜು ಮಾಡಲಾಗುವುದು.

ಈ) ಸಿ ಮತ್ತು ಡಿ-ಮಳಿಗೆ

ಸಾಮಾನ್ಯ ಶಸ್ತ್ರಕ್ರಿಯಾ ಉಪಕರಣಗಳು ಬ್ಯಾಂಡೇಜುಗಳು, ಹತ್ತಿ, ಹೊಲಿಗೆ ಹಾಕುವ ದಾರಗಳು ಮತ್ತು ಶೀತಲೀಕರಣದಲ್ಲಿ ರಕ್ಷಿಸಿಡುವ ಔಷಧಿಗಳನ್ನು ಸಂಗ್ರಹಿಸಿ ಸರಬರಾಜು ಮಾಡಲಾಗುವುದು.

1992-93ನೇ ಸಾಲಿಗೆ ಆಯವ್ಯಯ ನಿಗದಿ ಮತ್ತು ವೆಚ್ಚವು (1992ರ ಡಿಸೆಂಬರ್ ವರೆಗಿನ) ಈ ಕೆಳಕಂಡಂತಿದೆ. (ರೂಪಾಯಿಗಳಲ್ಲಿ)

| | ಆಯವ್ಯಯ | ಖರ್ಚು |
|---|---|---|
| 1) ಆರೋಗ್ಯ | 10,66,58,000-00 | 2,39,69,052-00 |
| 2) ವೈದ್ಯಕೀಯ ಶಿಕ್ಷಣ | 3,81,09,000-00 | 2,80,67,294-00 |
| 3) ಕುಟುಂಬ ಕಲ್ಯಾಣ | 20,56,865-00 | 10,26,421-00 |
| | 14,68,23,865-00 | 5,30,62,767-00 |

ರಾಜ್ಯ ಆರೋಗ್ಯ ಸಾರಿಗೆ ಸಂಸ್ಥೆ:—

ಕುಟುಂಬ ಕಲ್ಯಾಣ ಕಾರ್ಯಕ್ರಮಗಳನ್ನೊಳಗೊಂಡಂತೆ ಇಲಾಖೆಯ ಎಲ್ಲಾ ಆರೋಗ್ಯ ಕಾರ್ಯಕ್ರಮಗಳು ಸುಗಮವಾಗಿ ನಡೆಯುವಂತೆ, ಸಂಬಲರ್ಹವಾದ ಸಾರಿಗೆ ವ್ಯವಸ್ಥೆಯನ್ನು ಒದಗಿಸುವುದೇ ಈ ಸಂಸ್ಥೆಯ ಮುಖ್ಯ ಉದ್ದೇಶವಾಗಿದೆ.

ಸಂಸ್ಥೆಯು ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯಕ್ಕೆ ಸಂಬಂಧಿಸಿದ ವಾಹನಗಳ ದುರಸ್ಥಿಯ ಕಾರ್ಯವನ್ನು ಸಹಾ ನೋಡಿಕೊಳ್ಳುವ ಹೊಣೆಯನ್ನು ಹೊತ್ತಿದೆ.

ನಿರ್ದೇಶನಾಲಯಕ್ಕೆ ಹೊಂದಿಕೊಂಡಿರುವ ಕೇಂದ್ರ ಕಾರ್ಯಾಗಾರವು ಟಿಂಕರಿಂಗ್, ಪೇಂಟಿಂಗ್ ಗಳನ್ನೊಳಗೊಂಡಂತೆ ಎಲ್ಲಾ ತರಹ ದುರಸ್ಥಿ ಕಾರ್ಯಗಳನ್ನು ಇಲಾಖೆಯ ಅಸ್ವಸ್ಥ ವಾಹನಗಳಿಗೆ ಒದಗಿಸುತ್ತಿದೆ.

ಇದಲ್ಲದೆ 18 ಜಿಲ್ಲಾ ಮುಖ್ಯ ಸ್ಥಳಗಳಲ್ಲಿ (ಬೆಂಗಳೂರು ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಯನ್ನು ಹೊರತುಪಡಿಸಿ) 18 ಸಂಚಾರಿ ದುರಸ್ಥಿ ಘಟಕಗಳಿವೆ. ಈ ಘಟಕಗಳಲ್ಲಿ ಕೂಡಾ ಜಿಲ್ಲೆಯಲ್ಲಿರುವ ವಾಹನಗಳ ದೊಡ್ಡ ಹಾಗೂ ಸಣ್ಣ ದುರಸ್ಥಿ ಕಾರ್ಯಗಳನ್ನು ನಡೆಸಿರುತ್ತವೆ.

ಈಗ ಈ ಸಂಚಾರಿ ಘಟಕಗಳು ಸಂಬಂಧಿಸಿದ ಜಿಲ್ಲಾ ಪರಿಷತ್ತುಗಳ ಅಧೀನಕ್ಕೊಳಪಟ್ಟು ಕೆಲಸ ನಿರ್ವಹಿಸುತ್ತಿವೆ.

ಇದಲ್ಲದೆ ಭಾರತೀಯ ಜನಸಂಖ್ಯಾ ಯೋಜನೆ-3(ಕರ್ನಾಟಕ) ಇದರ ವ್ಯಾಪ್ತಿಯಲ್ಲಿ ಬರುವ ಗುಲ್ಬರ್ಗಾ ಮತ್ತು ಹುಬ್ಬಳ್ಳಿಯಲ್ಲಿರುವ ಕಾರ್ಯಾಗಾರಗಳಲ್ಲಿ, ಗುಲ್ಬರ್ಗಾ ಮತ್ತು ಬೆಳಗಾವಿ ವಿಭಾಗದ ವ್ಯಾಪ್ತಿಯಲ್ಲಿ ಬರುವ ವಾಹನಗಳ ದುರಸ್ಥಿ ಕಾರ್ಯಗಳನ್ನು ನಿರ್ವಹಿಸುತ್ತವೆ.

1992–93ನೇ ಸಾಲಿನಲ್ಲಿ ನೇತ್ರ ಯೋಜನೆ: ಮಲೇರಿಯಾ ಕಾರ್ಯಕ್ರಮದಡಿಯಲ್ಲಿ ಐದು ವಾಹನಗಳನ್ನು ಖರೀದಿಸಲಾಗಿದೆ.

31–12–1992ರಂದು ಇಲಾಖೆಯಲ್ಲಿ ಇದ್ದ ಒಟ್ಟು ವಾಹನಗಳ ಸಂಖ್ಯೆ: 1620.

1992–93ನೇ ಸಾಲಿನಲ್ಲಿ (ಡಿಸೆಂಬರ್ 92ರ ಅಂತ್ಯದವರೆಗೆ) ಇಲಾಖೆಯಲ್ಲಿಯ ಒಟ್ಟು 1620 ವಾಹನಗಳ ಪೈಕಿ 1275 ವಾಹನಗಳು ಚಲನ ಸ್ಥಿತಿಯಲ್ಲಿದ್ದು, ಉಳಿದ 345 ವಾಹನಗಳು ವಿವಿಧ ಕಾರಣಗಳಿಗಾಗಿ ಅಚಲನ ಸ್ಥಿತಿಯಲ್ಲಿರುತ್ತವೆ.

| ಜನಸಂಖ್ಯಾ ಸೂಚಕ | ಕರ್ನಾಟಕ | ಭಾರತ |
|---|---|---|
| 1 ಜನನ ಪ್ರಮಾಣ (1991) (ತಾತ್ಕಾಲಿಕ, ಸಾವಿರ ಜನಸಂಖ್ಯೆಗೆ) | | |
| ಅ) ಗ್ರಾಮೀಣ | 27.8 | 30.8 |
| ಆ) ನಗರ | 23.9 | 24.1 |
| ಇ) ಸಂಯುಕ್ತ | 26.8 | 29.3 |
| 2 ಮರಣ ಪ್ರಮಾಣ (1991) (ತಾತ್ಕಾಲಿಕ, ಸಾವಿರ ಜನಸಂಖ್ಯೆಗೆ) | | |
| ಅ) ಗ್ರಾಮೀಣ | 9.7 | 10.5 |
| ಆ) ನಗರ | 6.9 | 7.0 |
| ಇ) ಸಂಯುಕ್ತ | 9.0 | 9.8 |
| 3 ಶಿಶು ಮರಣ ಪ್ರಮಾಣ (1991) (ತಾತ್ಕಾಲಿಕ, ಸಾವಿರ ಸಜೀವ ಜನನಕ್ಕೆ) | | |
| ಅ) ಗ್ರಾಮೀಣ | 87 | 86 |
| ಆ) ನಗರ | 47 | 52 |
| ಇ) ಸಂಯುಕ್ತ | 77 | 80 |
| 4 ನಿರೀಕ್ಷಿತ ಆಯುಃ ಪ್ರಮಾಣ (1991-96ರ ಅಂದಾಜು) | | |
| ಅ) ಪುರುಷರು | 64.15 | 60.6 |
| ಆ) ಮಹಿಳೆಯರು | 65.30 | 61.7 |

ಇತರೆ ಕಾರ್ಯಕ್ರಮಗಳು:—

ಲಸಿಕೆ ತಯಾರಿಕೆ:—

1) ಕಾಲರಾ ವಿರುದ್ಧದ ಮತ್ತು ಟೈಫಾಯಿಡ್ ವಿರುದ್ಧದ ಲಸಿಕೆ:—

ಸಾರ್ವಜನಿಕ ಆರೋಗ್ಯ ಸಂಸ್ಥೆಯು ರಾಜ್ಯ ಮಟ್ಟದ ಪ್ರಯೋಗಾಲಯವಾಗಿದ್ದು, ಇದು ಪ್ರಯೋಗಾಲಯದ ಸರಣಿಯಲ್ಲಿ ಒಂದಾಗಿರುತ್ತೆ. ಈ ಸಂಸ್ಥೆಯ ಸೂಕ್ಷ್ಮ ಜೀವಾಣು ವಿಭಾಗವು ಕಾಲರ ವಿರುದ್ಧದ ಮತ್ತು ಟೈಫಾಯಿಡ್ ವಿರುದ್ಧದ ಲಸಿಕೆಯನ್ನು ತಯಾರಿಸುತ್ತಿದೆ.

1992–93ನೇ ಸಾಲಿನಲ್ಲಿ (92ರ ನವಂಬರ್ ಅಂತ್ಯದವರೆಗೆ) 4,21,000 ಡೋಸ್‌ಗಳಷ್ಟು ಕಾಲರಾ ವಿರುದ್ಧದ ಲಸಿಕೆಯನ್ನು ಮತ್ತು 44,100 ಡೋಸ್ ಟೈಫಾಯಿಡ್ ವಿರುದ್ಧದ ಲಸಿಕೆಯನ್ನು ತಯಾರಿಸಲಾಗಿದೆ.

2) ಕೆ.ಎಫ್.ಡಿ. ಲಸಿಕೆ:

ಶಿವಮೊಗ್ಗದ ಸೂಕ್ಷ್ಮಾಣು ಜೀವಿ ಪ್ರಯೋಗಾಲಯದ ಕೆ.ಎಫ್.ಡಿ. ಲಸಿಕೆ ಘಟಕವು 1992ನೇ ಸಾಲಿನಲ್ಲಿ 1,22,670 ಎಂ.ಎಲ್‌ಗಳಷ್ಟು ಕೆ.ಎಫ್.ಡಿ. ಲಸಿಕೆಯನ್ನು ತಯಾರಿಸಿದೆ.

### 3) ಹುಚ್ಚು ನಾಯಿ ಕಡಿತದ ವಿರುದ್ಧದ ಲಸಿಕೆ:

ಹುಚ್ಚು ನಾಯಿ ಕಡಿತದ ವಿರುದ್ಧದ ಲಸಿಕೆಯನ್ನು ತಯಾರಿಸುವುದು ಮತ್ತು (ಬಿ.ಪಿ.ಎಲ್. ಇನ್ ಆಕ್ಟಿವೇಟೆಡ್) ಮತ್ತು ಇದನ್ನು ಕರ್ನಾಟಕ ರಾಜ್ಯದ ಎಲ್ಲಾ ಸರ್ಕಾರಿ ಆಸ್ಪತ್ರೆಗಳಿಗೂ ಮತ್ತು ಸ್ಥಳೀಯ ಸಂಸ್ಥೆಗಳಿಂದ ನಡೆಸಲ್ಪಡುವ ಆರೋಗ್ಯ ಮತ್ತು ವೈದ್ಯಕೀಯ ಆಸ್ಪತ್ರೆಗಳಿಗೂ ಹಾಗೂ ರಿಜಿಸ್ಟರ್ಡ್ ವೈದ್ಯಕೀಯ ವೃತ್ತಿಗಾರರಿಗೆ ಕೂಡ ಪೂರೈಸಲಾಗುವುದು. ಇದಲ್ಲದೆ, ಯು.ಐ.ಪಿ. ಲಸಿಕೆಗಳನ್ನು ಸಂಗ್ರಹಿಸುವುದು ಮತ್ತು ಬೆಳಗಾಂ, ಗುಲ್ಬರ್ಗಾ ವಿಭಾಗಗಳ 8 ಜಿಲ್ಲೆಗಳಿಗೆ ಮತ್ತು ಬೆಂಗಳೂರು ವಿಭಾಗದ ಚಿತ್ರದುರ್ಗ ಜಿಲ್ಲೆಗೆ ಪೂರೈಸುವುದು ಬೇರೆ ಬೇರೆ ವೈದ್ಯಕೀಯ ಸಂಸ್ಥೆಗಳ ವೈದ್ಯಕೀಯ ವಿದ್ಯಾರ್ಥಿಗಳು ಮತ್ತು ಆರೋಗ್ಯ ನಿರೀಕ್ಷಕರ ತರಬೇತಿ ಹೊಂದುತ್ತಿರುವವರು ಮತ್ತು ಜಿಲ್ಲಾ ಆಸ್ಪತ್ರೆಗಳ ಸಹಾಯಕ ದಾದಿಯರು, ಎ.ಎನ್.ಎಂ.ಗಳು ಮೊದಲಾದವರುಗಳು ಈ ಸಂಸ್ಥೆಗೆ ಭೇಟಿ ನೀಡುತ್ತಿದ್ದು, ಅವರಿಗೆ ಹುಚ್ಚು ನಾಯಿ ಕಡಿತದ ವಿರುದ್ಧ ಲಸಿಕೆ ತಯಾರಿಕೆಯು, ಪರೀಕ್ಷೆ ಹಾಗೂ ಚಿಕಿತ್ಸೆ ವಿಧಾನದ ಬಗ್ಗೆ ಪ್ರಾತ್ಯಕ್ಷಿಕೆಗಳನ್ನು ಏರ್ಪಡಿಸಲಾಗುತ್ತದೆ. ಜಿಲ್ಲಾ ಆಸ್ಪತ್ರೆ, ಬೆಳಗಾಂ ಇಲ್ಲಿಂದ [illegible]ಹಿಸಲ್ಪಡುವ ಐ. ವಿ. ದ್ರಾವಣವನ್ನು ಸೂಕ್ಷ್ಮ ಕ್ರಿಮಿ ರಹಿತವಾಗಿರುವುದನ್ನು ಕಂಡು ಹಿಡಿಯುವ ಬಗ್ಗೆ ಪರೀಕ್ಷಿಸುವುದು.

ಈ ಸಂಸ್ಥೆಯು ಶಿವಮೊಗ್ಗೆಯ ಸೂಕ್ಷ್ಮಾಣು ಜೀವಿ ಪ್ರಯೋಗಾಲಯದ ಕೆ.ಎಫ್.ಡಿ. ಲಸಿಕೆ ತಯಾರಿಕಾ ಘಟಕವು ತಯಾರಿಸಿದ ಕೆ.ಎಫ್.ಡಿ. ಲಸಿಕೆಯ ಗುಣ ನಿಯಂತ್ರಣ ಪರೀಕ್ಷೆಯನ್ನು ಸಹ ಕೈಗೊಳ್ಳಲಾಗುತ್ತದೆ.

1992-93ನೇ ಸಾಲಿನ ಗುರಿಯು 25,00,000 ಎಂ.ಎಲ್. ಗಳಾಗಿದ್ದು 1992ರ ನವೆಂಬರ್ ಅಂತ್ಯದವರೆಗೆ 18,90;280 ಎಂ.ಎಲ್.ಗಳಷ್ಟು ಹುಚ್ಚುನಾಯಿ ಕಡಿತ ವಿರುದ್ಧದ ಲಸಿಕೆಯನ್ನು ತಯಾರಿಸಲಾಗಿದೆ. ಇದು ವಾರ್ಷಿಕ ಗುರಿಯ ಶೇಕಡ 75.6 ರಷ್ಟು ಇರುತ್ತದೆ.

## ಆಸ್ಪತ್ರೆ ಫಾರ್ಮಸಿ

ರಾಜ್ಯದಲ್ಲಿ ಹದಿನೇಳು ಆಸ್ಪತ್ರೆ ಫಾರ್ಮಸಿ ಘಟಕಗಳು ಮಂಜೂರಾಗಿದ್ದು ಅದರಲ್ಲಿ 13 ಘಟಕಗಳು ಕಾರ್ಯ ನಿರ್ವಹಿಸುತ್ತಿರುತ್ತವೆ.

ಉದ್ದೇಶಗಳು:

1) ರಾಜ್ಯದ ಸರ್ಕಾರಿ ಆಸ್ಪತ್ರೆಗಳಲ್ಲಿ ರೋಗಿಗಳ ಉಪಯೋಗಕ್ಕಾಗಿ ಜೀವ ಉಳಿಸುವ ಔಷಧಿಗಳಾದ ಗ್ಲೂಕೋಸ್, ಗ್ಲೂಕೋಸ್ ಸಲೈನ್ ನಾರ್ಮಲ್ ಸಲೈನ್ ಇತ್ಯಾದಿ ಅಂತರ್ನಾಳದ್ರಾವಣಗಳನ್ನು ತಯಾರಿಸುವುದು.
2) ತಾಂತ್ರಿಕವಾಗಿ ಉತ್ತಮವಾದ ಔಷಧ ಸಂಸ್ಕರಣೆ ಮತ್ತು ವಿತರಣಾ ವಿಭಾಗ, ಸೆಂಟ್ರಲ್ ಸ್ಟೆರೈಲ್ ಸಪ್ಲೈ ವಿಭಾಗ ಮತ್ತು ದಾಸ್ತಾನು ಪದ್ಧತಿಗಳನ್ನು ರೂಢಿಸುವುದು.
3) ಆಸ್ಪತ್ರೆ ಸಿಬ್ಬಂದಿಗಳ ಮತ್ತು ರೋಗಿಗಳ ಸಹಾಯಕರ ಉಪಯೋಗಕ್ಕಾಗಿ ಒಂದು ಔಷಧಿ ಮಾಹಿತಿ ಸೇವೆಯನ್ನು ಸ್ಥಾಪಿಸುವುದು.

ಈಗ ರಾಜ್ಯದಲ್ಲಿ ಒಟ್ಟು ಹದಿನೇಳು ಆಸ್ಪತ್ರೆ ಫಾರ್ಮಸಿಗಳು ಮಂಜೂರಾಗಿದ್ದು ಅವುಗಳ ವಿವರ ಈ ಕೆಳಕಂಡಂತೆ ಇದೆ.

| ಕ್ರಮ ಸಂಖ್ಯೆ | ಆಸ್ಪತ್ರೆ ಫಾರ್ಮಸಿ ಘಟಕಗಳ ಹೆಸರು | | ಯೋಜನೆ ಅಥವಾ ಯೋಜನೇತರ |
|---|---|---|---|
| 1 | ಸಿ.ಜಿ. ಆಸ್ಪತ್ರೆ, ದಾವಣಗೆರೆ | ... | ಯೋಜನೇತರ |
| 2 | ಕೆ.ಎಂ.ಸಿ. ಆಸ್ಪತ್ರೆ, ಹುಬ್ಬಳ್ಳಿ | ... | ಯೋಜನೇತರ |
| 3 | ಜಿಲ್ಲಾ ಆಸ್ಪತ್ರೆ, ಬೆಳಗಾಂ | ... | ಯೋಜನೇತರ |
| 4 | ಜಿಲ್ಲಾ ಆಸ್ಪತ್ರೆ, ಬಿಜಾಪುರ | ... | ಯೋಜನೇತರ |
| 5 | ಜಿಲ್ಲಾ ಆಸ್ಪತ್ರೆ, ಚಿತ್ರದುರ್ಗ | ... | ಯೋಜನೇತರ |
| 6 | ಜಿಲ್ಲಾ ಆಸ್ಪತ್ರೆ, ಮಂಡ್ಯ | ... | ಯೋಜನೇತರ |
| 7 | ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು | ... | ಯೋಜನೇತರ |
| 8 | ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆ ಬೆಂಗಳೂರು | ... | ಯೋಜನೇತರ |
| 9 | ಕೆ.ಆರ್. ಆಸ್ಪತ್ರೆ, ಮೈಸೂರು | ... | ಯೋಜನೇತರ |
| 10 | ವೆನ್‌ಲಾಕ್ ಆಸ್ಪತ್ರೆ, ಮಂಗಳೂರು | ... | ಯೋಜನೇತರ |
| 11 | ವೈದ್ಯಕೀಯ ಕಾಲೇಜು ಆಸ್ಪತ್ರೆ, ಬಳ್ಳಾರಿ | ... | ಯೋಜನೇತರ |
| 12 | ಜಿಲ್ಲಾ ಆಸ್ಪತ್ರೆ, ಗುಲ್ಬರ್ಗಾ | ... | ಯೋಜನೇತರ (ಕಾರ್ಯ ನಿರ್ವಹಿಸುತ್ತಿಲ್ಲ) |
| 13 | ಜಿಲ್ಲಾ ಆಸ್ಪತ್ರೆ, ಬೀದರ್ | ... | ಯೋಜನೇತರ |
| 14 | ಮೆಗ್ಗಾನ್ ಆಸ್ಪತ್ರೆ, ಶಿವಮೊಗ್ಗ | ... | ಯೋಜನೇತರ |
| 15 | ಜಿಲ್ಲಾ ಆಸ್ಪತ್ರೆ, ಕೋಲಾರ | ... | ಯೋಜನೆ, ಕಟ್ಟಡದ ಕೆಲಸ ಪೂರ್ಣಗೊಂಡಿದೆ ವಿದ್ಯುದೀಕರಣ ಬಿಟ್ಟು |
| 16 | ಜಿಲ್ಲಾ ಆಸ್ಪತ್ರೆ, ರಾಯಚೂರು | ... | ಯೋಜನೆ, ಕಟ್ಟಡ ಇಲ್ಲದ್ದರಿಂದ ಇನ್ನೂ ಪ್ರಾರಂಭಿಸಿಲ್ಲ. |
| 17 | ಜಿಲ್ಲಾ ಆಸ್ಪತ್ರೆ, ಕಾರವಾರ | ... | ಯೋಜನೆ, ಕಟ್ಟಡವಿಲ್ಲದ್ದರಿಂದ ಇನ್ನೂ ಪ್ರಾರಂಭಿಸಿಲ್ಲ. |

1992–93ನೇ ಸಾಲಿನಲ್ಲಿ (ಏಪ್ರಿಲ್ 1992 ರಿಂದ ನವೆಂಬರ್ 1992ರ ಅಂತ್ಯದವರೆಗೆ) 2,65,471 ಶೀಸೆಗಳಷ್ಟು ಅಂತರ್ನಾಳ ದ್ರವವನ್ನು ಉತ್ಪಾದಿಸಲಾಗಿದೆ.

## ಆರೋಗ್ಯ ಸಲಕರಣೆ ದುರಸ್ತಿ ಮತ್ತು ನಿರ್ವಹಣ ಘಟಕ

ಈ ಘಟಕವು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ ಮತ್ತು ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯದ ವ್ಯಾಪ್ತಿಯಲ್ಲಿ ಬರುವ ಸರ್ಕಾರಿ ಆಸ್ಪತ್ರೆಗೆ ಕ್ಷ-ಕಿರಣ ಮತ್ತು ಇತರ ಆರೋಗ್ಯ ಸಲಕರಣೆಗಳ ಸರಬರಾಜು ಮತ್ತು ದುರಸ್ತಿ ಕಾರ್ಯ ನಿರ್ವಹಿಸುತ್ತದೆ.

1992-93ನೇ ಸಾಲಿನಲ್ಲಿ ಈ ಘಟಕವು ಈ ಕೆಳಕಂಡ ಸಲಕರಣೆಗಳನ್ನು ಖರಿದಿಸಿ ಕೆಳಕಂಡ ಸಂಸ್ಥೆಗಳಿಗೆ ಸರಬರಾಜು ಮಾಡಿದೆ.

| ಕ್ರಮ ಸಂಖ್ಯೆ | ಸಂಸ್ಥೆ | ಬಾಯಲ್ಸ್ ಆಪರೇಟಸ್ | ಡೌಲ್ ಆಪರೇಟಸ್ | ಸಕ್ಷನ್ ಆಪರೇಟಸ್ | ಓ.ಟಿ. ಲೈಟ್ (ಪೋರ್ಟಬಲ್) | ಬಿ.ಪಿ. ಆಪರೇಟಸ್ |
|---|---|---|---|---|---|---|
| 1 | ಹೆಚ್.ಎನ್.ಎಸ್. (ಹೆಂಗಸರ ಮತ್ತು ಮಕ್ಕಳ) ಆಸ್ಪತ್ರೆ ಬೆಂಗಳೂರು | 1 | 3 | 3 | ... | 4 |
| 2 | ಸಾಂಕ್ರಾಮಿಕ ರೋಗಗಳ ಆಸ್ಪತ್ರೆ, ಬೆಂಗಳೂರು | ... | ... | ... | 1 | 5 |
| 3 | ಸಾರ್ವಜನಿಕ ಆಸ್ಪತ್ರೆ, ಜಯನಗರ | ... | 4 | 6 | 2 | ... |
| 4 | ಜಿಲ್ಲಾ ಆಸ್ಪತ್ರೆ, ತುಮಕೂರು | 1 | 2 | 5 | ... | ... |
| 5 | ಜಿಲ್ಲಾ ಆಸ್ಪತ್ರೆ, ಕೋಲಾರ | 1 | ... | 1 | 2 | ... |
| 6 | ಕುಷ್ಟರೋಗ ಆಸ್ಪತ್ರೆ, ಬೆಂಗಳೂರು | ... | ... | ... | ... | 4 |
| 7 | ಕೆ. ಸಿ. ಜನರಲ್ ಆಸ್ಪತ್ರೆ, ಬೆಂಗಳೂರು | ... | ... | 7 | ... | ... |
| 8 | ಜಿಲ್ಲಾ ಆಸ್ಪತ್ರೆ, ಚಿತ್ರದುರ್ಗ | 1 | ... | ... | 2 | ... |
| 9 | ಜಿಲ್ಲಾ ಆಸ್ಪತ್ರೆ, ಮಂಡ್ಯ | 1 | ... | 5 | 2 | 12 |
| 10 | ಜಿಲ್ಲಾ ಆಸ್ಪತ್ರೆ, ಬೀದರ್ | 3 | 6 | ... | 3 | 4 |
| 11 | ಜಿಲ್ಲಾ ಆಸ್ಪತ್ರೆ, ಹಾಸನ | 1 | ... | 2 | 2 | ... |
| 12 | ಜಿಲ್ಲಾ ಆಸ್ಪತ್ರೆ, ಕೆ.ಜಿ.ಎಫ್. | 1 | ... | 4 | 1 | ... |
| 13 | ಜಿಲ್ಲಾ ಆಸ್ಪತ್ರೆ, ಬಿಜಾಪುರ | ... | ... | ... | 2 | ... |
| | ಒಟ್ಟು | 10 | 15 | 33 | 17 | 29 |

## ತರಬೇತಿ ಕಾರ್ಯ ಚಟುವಟಿಕೆಗಳು

1) ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿರುವ ವೈದ್ಯಕೀಯ ಮತ್ತು ಅರೆ ವೈದ್ಯಕೀಯ ಸಿಬ್ಬಂದಿ ವರ್ಗದವರಿಗೆ ಮುಂದುವರಿದ ಶಿಕ್ಷಣ ನೀಡಲಾಗುತ್ತಿದೆ.

ರಾಜ್ಯದಲ್ಲಿರುವ 5 ಆರೋಗ್ಯ ಮತ್ತು ಕುಟುಂಬ ಕಲ್ಯಾಣ ತರಬೇತಿ ಕೇಂದ್ರಗಳಲ್ಲಿ 1992–93ನೇ ಸಾಲಿನಲ್ಲಿ (ನವೆಂಬರ್ 1992ರ ಅಂತ್ಯದವರೆಗೆ) 2 ವಾರಗಳ ಅವಧಿಯಲ್ಲಿ ಮುಂದುವರೆದ ಶಿಕ್ಷಣವನ್ನು ನೀಡಲಾಗಿದೆ.

| ಕ್ರಮಸಂಖ್ಯೆ | ತರಬೇತಿ ವಿವರ | ತರಬೇತಿ ಪಡೆದವರ ಸಂಖ್ಯೆ |
|---|---|---|
| 1 | ವೈದ್ಯಾಧಿಕಾರಿಗಳು (ಪುರುಷರು) (3 ತಂಡಗಳು) | 129 |
| 2 | ಮಹಿಳಾ ವೈದ್ಯಾಧಿಕಾರಿಗಳು (1 ತಂಡ) | 31 |
| 3 | ಕ್ಷೇತ್ರ ಆರೋಗ್ಯ ಶಿಕ್ಷಕರು (2 ತಂಡಗಳು) | 72 |
| 4 | ಪದವೀಧರ ಕ್ಷೇತ್ರ ಆರೋಗ್ಯ ಶಿಕ್ಷಕರು ''ಚೇತನ'' ಕಾರ್ಯಕ್ರಮದಡಿಯಲ್ಲಿ (1 ತಿಂಗಳ ಅವಧಿ) (3 ತಂಡಗಳು) | 99 |
| 5 | ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರ ತರಬೇತಿ ಶಾಲೆಯ ಸಿಬ್ಬಂದಿಯವರಿಗೆ (1 ತಂಡ) | 70 |
| 6 | ಹಿರಿಯ ಆರೋಗ್ಯ ಸಹಾಯಕರು (ಪುರುಷರು) ಬೆಂಗಳೂರು ಮತ್ತು ಹುಬ್ಬಳ್ಳಿಯಲ್ಲಿ–2 ತಂಡಗಳು ಮತ್ತು ಮಂಡ್ಯ. ರಾಮನಗರ ಮತ್ತು ಗುಲ್ಬರ್ಗಾದಲ್ಲಿ (4 ತಂಡಗಳು) | 201 |
| 7 | ಹಿರಿಯ ಆರೋಗ್ಯ ಸಹಾಯಕರು (ಮಹಿಳೆಯರು) ಬೆಂಗಳೂರು ಮತ್ತು ಹುಬ್ಬಳ್ಳಿಯಲ್ಲಿ 2 ತಂಡಗಳು ಮತ್ತು ಮಂಡ್ಯ, ರಾಮನಗರ ಗುಲ್ಬರ್ಗಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ತರಬೇತಿ ಕೇಂದ್ರಗಳಲ್ಲಿ (ಕೇಂದ್ರದಲ್ಲಿ 4 ತಂಡಗಳಂತೆ) | 170 |
| 8 | ಸಂಚಾರಿ ತರಬೇತಿ ತಂಡ, ಬೆಂಗಳೂರು ಇವರಿಂದ ಹಿರಿಯ ಆರೋಗ್ಯ ಮತ್ತು ಕಿರಿಯ ಸಹಾಯಕರರಿಗೆ (ಪುರುಷ ಮತ್ತು ಮಹಿಳಾ) ನೀಡಿದ ತರಬೇತಿ | 134 |
| 9 | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ತರಬೇತಿ ಕೇಂದ್ರಗಳ ಸಿಬ್ಬಂದಿ ವರ್ಗದವರಿಂದ ಆಯ್ಕೆಯಾದ ಕೆಲವು ಪ್ರಾಥಮಿಕ ಆರೋಗ್ಯ ಕೇಂದ್ರಗಳ ಸಿಬ್ಬಂದಿ ವರ್ಗದವರಿಗೆ ನಿರಂತರ ಶಿಕ್ಷಣ ಕಾರ್ಯಕ್ರಮದ ತರಬೇತಿ (ಒಂದು ದಿನ) | ಆಯ್ಕೆಯಾದ 34 ಪ್ರಾ.ಆ. ಕೇಂದ್ರ |
| 10 | ಬೆಂಗಳೂರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ತರಬೇತಿ ಕೇಂದ್ರದಲ್ಲಿ ತರಬೇತಿ ಹೊಂದದ ಜಿಲ್ಲಾ ಕುಷ್ಟ ರೋಗ ಅಧಿಕಾರಿಗಳಿಗೆ ರಾಷ್ಟ್ರೀಯ ಕುಷ್ಟರೋಗ ಕೇಂದ್ರಗಳಲ್ಲಿರುವ ವೈದ್ಯಾಧಿಕಾರಿಗಳಿಗೆ (6 ದಿನಗಳು) ತರಬೇತಿ (1 ತಂಡ) | 13 |
| 11 | ಗುಲ್ಬರ್ಗಾ, ರಾಯಚೂರು ಮತ್ತು ಬಳ್ಳಾರಿ ಜಿಲ್ಲೆಯ ವೈದ್ಯಾಧಿಕಾರಿಗಳಿಗೆ ಕುಷ್ಟರೋಗ ನಿರ್ಮೂಲನಾ ಕಾರ್ಯಕ್ರಮದಡಿಯಲ್ಲಿ 3 ದಿನಗಳ ಅವಧಿಯ (ಎಂಡಿಟಿ ಜಿಲ್ಲೆಗಳ) ಓರಿಯಂಟೇಷನ್ ತರಬೇತಿ (2 ತಂಡಗಳು) | 164 |

2) ಈ ಸಾಲಿನಲ್ಲಿ 5 ಜನ ಉಪ ಆರೋಗ್ಯ ಶಿಕ್ಷಣಾಧಿಕಾರಿಗಳು ಮತ್ತು ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರ ತರಬೇತಿ ಕೇಂದ್ರದ 7 ಜನ ಬೋಧಕ ಸಿಬ್ಬಂದಿ ವರ್ಗದವರನ್ನು ಗ್ರಾಮೀಣ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಂಸ್ಥೆ ಗಾಂಧಿಗ್ರಾಮಕ್ಕೆ ನಿಯೋಜಿಸಲಾಯಿತು.

3) ಹೆಚ್.ಐ.ವಿ. ಏಯ್ಡ್ಸ್ ತಡೆಗಟ್ಟುವಿಕೆ ಮತ್ತು ಹತೋಟಿ ಕಾರ್ಯಕ್ರಮದ ಬಗ್ಗೆ ಮಲೇರಿಯಾ ಕ್ಷಯ, ಪ್ಲೇಗ್ ನಿಯಂತ್ರಣ ಸಾಂಕ್ರಾಮಿಕ ರೋಗ ವಿಷ ವಿರುದ್ಧ ಔಷಧಿಗಳು, ದುರಭ್ಯಾಸ ಚಟದ ವಿರುದ್ಧ, ಮಾನಸಿಕ ಆರೋಗ್ಯ ಮತ್ತು ಮುಖಂಡರ ತರಬೇತಿಗಾಗಿ ಒಟ್ಟು 145 ವೈದ್ಯಕೀಯ ಮತ್ತು 158 ಅರೆ. ವೈದ್ಯಕೀಯ ವರ್ಗದವರನ್ನು ರಾಜ್ಯದೊಳಗೆ ಮತ್ತು ಹೊರ ರಾಜ್ಯಗಳಿಗೆ ತರಬೇತಿ ಪಡೆಯಲು/ಕಾರ್ಯಾಗಾರದಲ್ಲಿ ಭಾಗವಹಿಸಲು ನಿಯೋಜಿಸಲಾಗಿದೆ.

4) 1992–93ನೇ ಸಾಲಿನಲ್ಲಿ ಸೌದಿ ಅರೇಬಿಯಾದಲ್ಲಿ ನಡೆಯುವ ಹಜ್ ಯಾತ್ರೆಯಲ್ಲಿ ಭಾಗವಹಿಸು ವವರ ವೈದ್ಯಕೀಯ ನೆರವಿಗಾಗಿ ಒಬ್ಬ ವೈದ್ಯರು ಮತ್ತು ಇಬ್ಬರು ಅರೆ ವೈದ್ಯಕೀಯ ಸಿಬ್ಬಂದಿ ಯನ್ನು ನಿಯೋಜಿಸಲಾಗಿದೆ.

ರಾಜ್ಯದಲ್ಲಿ ಪ್ರತಿಯೊಂದು ಜಿಲ್ಲೆಗೆ ಒಂದರಂತೆ 19 ಕಿರಿಯ ಮಹಿಳಾ ಆರೋಗ್ಯ ಸಹಾಯಕರ ತರಬೇತಿ ಕೇಂದ್ರಗಳು ಇದ್ದು, ಪ್ರತಿಯೊಂದು ಕೇಂದ್ರದಲ್ಲಿ 30 ಅಭ್ಯರ್ಥಿಗಳಿಗೆ ತರಬೇತಿಯ ಅವಕಾಶವಿದೆ. 1992–93ರಲ್ಲಿ 570 ಅಭ್ಯರ್ಥಿಗಳ ದಾಖಲಾತಿಯಾಗಿದೆ.

## ಹಿರಿಯ ಮಹಿಳಾ ಆರೋಗ್ಯ ಸಹಾಯಕರ ತರಬೇತಿ:

4 ತರಬೇತಿ ಕೇಂದ್ರಗಳು ಬೆಂಗಳೂರು, ಮಂಗಳೂರು, ಬೆಳಗಾವಿ ಮತ್ತು ಗುಲ್ಬರ್ಗಾದಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಕೆಲಸದಲ್ಲಿರುವ ಕಿರಿಯ ಮಹಿಳಾ ಆರೋಗ್ಯ ಸಹಾಯಕರಿಗೆ ಹಿರಿಯ ಮಹಿಳಾ ಆರೋಗ್ಯ ಸಹಾಯಕರಾಗಿ ಬಡ್ತಿ ಹೊಂದಲು ಅನುಕೂಲವಾಗುವಂತೆ ತರಬೇತಿಯನ್ನು ನೀಡುತ್ತಿದೆ. ಪ್ರತಿ ಕೇಂದ್ರದಲ್ಲಿ 30 ಅಭ್ಯರ್ಥಿಗಳಿಗೆ ತರಬೇತಿ ನೀಡುವ ಅವಕಾಶವಿದೆ. 1992–93ನೇ ಸಾಲಿನಲ್ಲಿ 120 ಅಭ್ಯರ್ಥಿಗಳಿಗೆ ತರಬೇತಿಯನ್ನು ನೀಡಲಾಯಿತು.

## ದಾದಿಯರ ತರಬೇತಿ :

ಪ್ರಾಥಮಿಕ ಆರೋಗ್ಯ ಕೇಂದ್ರ ಮತ್ತು ಉಪಕೇಂದ್ರಗಳಲ್ಲಿ ಸ್ಥಳೀಯ ದಾದಿಯರಿಗೆ 30 ದಿನಗಳ ತರಬೇತಿಯನ್ನು ಕೊಡಲಾಗುವುದು. ಪ್ರತಿ ಅಭ್ಯರ್ಥಿಗೆ ತಿಂಗಳಿಗೆ 300 ರೂ. ಗಳ ಶಿಷ್ಯ ವೇತನ ಕೊಡಲಾಗುತ್ತದೆ. ತರಬೇತಿಯ ನಂತರ ಪ್ರತಿಯೊಬ್ಬ ದಾದಿಯರಿಗೆ ಹೆರಿಗೆ ಸಲಕರಣೆಗಳುಳ್ಳ ಕೈಪೆಟ್ಟಿ ಯನ್ನು ಕೊಟ್ಟು ಪ್ರತಿಯೊಂದು ಹೆರಿಗೆಗೆ 3–00 ರೂಗಳಂತೆ ಹೆರಿಗೆ ಭತ್ಯೆಯನ್ನು ಕೊಡಲಾಗುತ್ತಿದೆ, 1992–93ನೇ ಸಾಲಿನಲ್ಲಿ 3,500 ದಾದಿಯವರಿಗೆ ತರಬೇತಿ ಕೊಡುವ ಗುರಿ ಹೊಂದಿದ್ದು 1.159 ದಾದಿಯರಿಗೆ ತರಬೇತಿಯನ್ನು ನೀಡಲಾಗಿದೆ.

## ಕ್ರಾಷ್ ತರಬೇತಿ ಕಾರ್ಯಕ್ರಮ:

ಹಿರಿಯ ಮತ್ತು ಕಿರಿಯ ಮಹಿಳಾ ಆರೋಗ್ಯ ಸಹಾಯಕರಿಗೆ ಜಿಲ್ಲಾ ಮಟ್ಟದ ಬಾಣಂತಿ ಸೇವಾ ಕೇಂದ್ರದಲ್ಲಿ ವಂಕಿ ಧಾರಣೆ ತಂತ್ರಜ್ಞಾನದ ಬಗ್ಗೆ ತರಬೇತಿ ನೀಡಲಾಗಿದೆ.

ಆಸ್ಪತ್ರೆ ಪ್ರಾಥಮಿಕ ಆರೋಗ್ಯ ಕೇಂದ್ರ ಮತ್ತು ಆರೋಗ್ಯ ಘಟಕಗಳಲ್ಲಿ ಕೆಲಸ ಮಾಡುವ ವೈದ್ಯರುಗಳಿಗೆ 10 ತರಬೇತಿ ಸಂಸ್ಥೆಗಳಲ್ಲಿ ವೈದ್ಯಕೀಯ ಗರ್ಭಪಾತದ ಬಗ್ಗೆ 30 ದಿನಗಳ ಕಾಲ ತರಬೇತಿ ನೀಡಲಾಗುತ್ತಿದೆ. 1992–93ನೇ ಸಾಲಿನಲ್ಲಿ 10 ಜನ ವೈದ್ಯರಿಗೆ ತರಬೇತಿಯನ್ನು ನೀಡಲಾಗಿದೆ.

## ಉದರ ದರ್ಶಕ ಶಸ್ತ್ರ ಚಿಕಿತ್ಸೆಯ ತರಬೇತಿ:

ಬೆಂಗಳೂರಿನ ವಾಣಿ ವಿಲಾಸ ಆಸ್ಪತ್ರೆ. ಕರ್ನಾಟಕ ವೈದ್ಯಕೀಯ ಮಹಾ ವಿದ್ಯಾಲಯ ಆಸ್ಪತ್ರೆ, ಹುಬ್ಬಳ್ಳಿ, ಕಸ್ತೂರ್ಬಾ ವೈದ್ಯಕೀಯ ಮಹಾ ವಿದ್ಯಾಲಯ, ಮಣಿಪಾಲ್ ಜಿಲ್ಲಾ ಆಸ್ಪತ್ರೆ, ಬೆಳಗಾವಿ ಮತ್ತು ಗುಲ್ಬರ್ಗಾದಲ್ಲಿ ಸ್ತ್ರೀರೋಗ ಶಸ್ತ್ರ ವಿಷಯದಲ್ಲಿ ಸ್ನಾತಕೋತ್ತರ ಡಿಪ್ಲೊಮೋ ಹೊಂದಿರುವ ವೈದ್ಯರು ಹಾಗೂ ಒಬ್ಬ ಶಸ್ತ್ರ ಚಿಕಿತ್ಸೆಯ ಶುಶ್ರೂಷಕಿ ಮತ್ತು ಒಬ್ಬ ಶಸ್ತ್ರ ಚಿಕಿತ್ಸಾ ಸಹಾಯಕಿಯರಿಗೆ 45 ದಿನಗಳ ಕಾಲ ತರಬೇತಿಯನ್ನು ನೀಡಲಾಗುತ್ತಿದೆ. 1992–93ನೇ ಸಾಲಿನಲ್ಲಿ 6 ಜನ ವೈದ್ಯರಿಗೆ ತರಬೇತಿಯನ್ನು ನೀಡಲಾಗಿದೆ.

### ಸಂಕ್ಷಿಪ್ತ ಸಾಮಾನ್ಯ ಶುಶ್ರೂಷಾ ತರಬೇತಿ (ಸಿಜಿಎನ್)

ಮಹಿಳಾ ಆರೋಗ್ಯ ಸಂದರ್ಶಕಿಯರಿಗೆ ಸಂಕ್ಷಿಪ್ತ ಸಾಮಾನ್ಯ ಶುಶ್ರೂಷಾ ತರಬೇತಿಯನ್ನು ಚಿತ್ರದುರ್ಗ ಮತ್ತು ಧಾರವಾಡ ಜಿಲ್ಲಾ ಆಸ್ಪತ್ರೆಗಳಲ್ಲಿ 6 ತಿಂಗಳುಗಳ ಕಾಲ ನೀಡಲಾಗುತ್ತದೆ. ಪ್ರತಿ ಜಿಲ್ಲೆಯಲ್ಲಿ 30 ಅಭ್ಯರ್ಥಿಗಳಿಗೆ ತರಬೇತಿಯನ್ನು ನೀಡುವ ಅವಕಾಶವಿದ್ದು 1992-93ನೇ ಸಾಲಿನಲ್ಲಿ 17 ಅಭ್ಯರ್ಥಿಗಳಿಗೆ ತರಬೇತಿಯನ್ನು ನೀಡಲಾಗಿದೆ.

## ದೊಡ್ಡ ಆಸ್ಪತ್ರೆ ಯೋಜನೆಗಳು 1992-93

1) ಸರ್ಕಾರದ ಆದೇಶ ಸಂಖ್ಯೆ : ಆಕುಕ 38 ಸಿಜಿಎಂ 91, ದಿನಾಂಕ. 7-5-92ರಲ್ಲಿ ಜಿಲ್ಲಾ ಆಸ್ಪತ್ರೆ ಚಿತ್ರದುರ್ಗ ಮತ್ತು ಕಾರವಾರ ಆಸ್ಪತ್ರೆಗಳಲ್ಲಿ ಮನೋರೋಗ ಚಿಕಿತ್ಸಾ ವಿಭಾಗಗಳನ್ನು ಪ್ರಾರಂಭಿಸಲು ಮಂಜೂರಾತಿ ನೀಡಲಾಗಿದೆ.

2) ಸರ್ಕಾರದ ಆದೇಶ ಸಂಖ್ಯೆ : ಆಕುಕ 185 ಸಿಜಿಎಂ 91, ದಿನಾಂಕ : 31-3-92ರಲ್ಲಿ ಎಸ್. ಸಿ. ಆಸ್ಪತ್ರೆ, ಹಾಸನದಲ್ಲಿ ಹೃದ್ರೋಗ ಕೇಂದ್ರ ತೆರೆಯಲು ಹೆಚ್ಚುವರಿ ಸಿಬ್ಬಂದಿಯನ್ನು ಮಂಜೂರು ಮಾಡಲಾಗಿದೆ.

3) ಸರ್ಕಾರದ ಆದೇಶ ಸಂಖ್ಯೆ : ಆಕುಕ 201 ಸಿಜಿಎಸ್ 89, ದಿನಾಂಕ. 18-7-92ರಲ್ಲಿ ತುಮಕೂರಿನ ಜಿಲ್ಲಾ ಆಸ್ಪತ್ರೆಯಲ್ಲಿ ಹೊಸ ಅಪರೇಷನ್ ಥಿಯೇಟರ್ ಸ್ಥಾಪಿಸಲು ಬೇಕಾದ ಹೆಚ್ಚುವರಿ ಸಿಬ್ಬಂದಿಯನ್ನು ಮಂಜೂರು ಮಾಡಲಾಗಿದೆ.

4) ಸರ್ಕಾರದ ಆದೇಶ ಸಂಖ್ಯೆ ಆಕುಕ 146 ಸಿಜಿಎನ್ 89, ದಿನಾಂಕ, 20-5-92ರಲ್ಲಿ ರಾಯಚೂರು ಜಿಲ್ಲಾ ಆಸ್ಪತ್ರೆಗೆ 500 ಹಾಸಿಗೆಯ ಕಟ್ಟಲಿರುವ ಸಂಕೀರ್ಣಕ್ಕೆ ರಾಜೀವಗಾಂಧಿ ಮೆಮೋರಿಯಲ್ ಆಸ್ಪತ್ರೆ ಎಂದು ನಾಮಕರಣ ಮಾಡಲು ಮಂಜೂರಾತಿಯನ್ನು ನೀಡಲಾಗಿದೆ.

5) ಸರ್ಕಾರದ ಆದೇಶ ಸಂಖ್ಯೆ ಆಕುಕ 293 ಸಿಜಿಎಂ 90, ದಿನಾಂಕ. 16-6-92ರಲ್ಲಿ ಕಾರವಾರದ ಜಿಲ್ಲಾ ಆಸ್ಪತ್ರೆಗೆ 130 ಹೆಚ್ಚಿನ ಹಾಸಿಗೆಗಳನ್ನು ಅಳವಡಿಸಲು 27 ಹೆಚ್ಚು ಸಿಬ್ಬಂದಿಯನ್ನು ಮಂಜೂರು ಮಾಡಿದೆ.

6) ಸರ್ಕಾರದ ಆದೇಶ ಸಂಖ್ಯೆ ಆಕುಕ 279 ಸಿಜಿಎಂ 92, ದಿನಾಂಕ. 28-8-92ರಲ್ಲಿ ಜಯನಗರದ ಸಾರ್ವಜನಿಕ ಆಸ್ಪತ್ರೆಯಲ್ಲಿರುವ ಹಾಸಿಗೆಗಳ ಸಂಖ್ಯೆಯನ್ನು 200 ರಿಂದ 300 ಹಾಸಿಗೆಗಳಿಗೆ ಹೆಚ್ಚಿಸಲು ಮತ್ತು 19 ಸಿಬ್ಬಂದಿಯನ್ನು ಸೃಷ್ಟಿಸಲು ಮಂಜೂರಾತಿ ನೀಡಲಾಗಿದೆ.

7) ಸರ್ಕಾರದ ಆದೇಶ ಸಂಖ್ಯೆ ಆಕುಕ 104 ಸಿಜಿಎನ್ 92, ದಿನಾಂಕ. 8-10-92ರಲ್ಲಿ ಇ. ಡಿ. ಆಸ್ಪತ್ರೆ, ಬೆಂಗಳೂರು, ಜಿಲ್ಲಾ ಆಸ್ಪತ್ರೆ, ಚಿತ್ರದುರ್ಗ ಮತ್ತು ಕೆ.ಎಸ್.ಟಿ.ಬಿ. ಆಸ್ಪತ್ರೆ, ಕೋಲಾರಗಳಲ್ಲಿ ನೀರಿನ ಸೌಲಭ್ಯವನ್ನು ಸುದಾರಿಸಲು ಮಂಜೂರಾತಿ ನೀಡಲಾಗಿದೆ.

## 1993-94ನೇ ಸಾಲಿನ ಪ್ರಸ್ತಾವನೆಗಳು

ಆರ್ಥಿಕ ಸಂಪನ್ಮೂಲಗಳಿಗನುಗುಣವಾಗಿ 1993-94ನೇ ಸಾಲಿನಲ್ಲಿ ಈ ಕೆಳಕಂಡ ಯೋಜನೆಗಳನ್ನು ಕೈಗೊಳ್ಳಲಾಗುವುದು. ಈಗಾಗಲೇ ಚಾಲ್ತಿಯಲ್ಲಿರುವ ಯೋಜನೆಗಳನ್ನು ಕಾರ್ಯಗತಗೊಳಿಸಲು ಆದ್ಯತೆ ನೀಡಲಾಗುವುದು,

1) 1991-92ನೇ ಮತ್ತು 92-93ನೇ ಸಾಲಿನಲ್ಲಿ ಮಂಜೂರಾಗಿರುವ ಯೋಜನೆಗಳನ್ನು ಚಾಲ್ತಿ ಯೋಜನೆಗಳಾಗಿ 1993-94ರಲ್ಲಿ ಮುಂದುವರಿಸಲಾಗುವುದು.

2) ಜಿಲ್ಲಾ ಆಸ್ಪತ್ರೆ, ಮಡಿಕೇರಿ, ಮಂಡ್ಯ ಮತ್ತು ಬೀದರ್ ಇವುಗಳಿಗೆ ಹೆಚ್ಚಿನ ಸಿಬ್ಬಂದಿಯನ್ನು ನಾರಮ್ಸ್ ಪ್ರಕಾರ ಮಂಜೂರು ಮಾಡುವುದು.

3) ಬೆಂಗಳೂರಿನ ಸಾಂಕ್ರಾಮಿಕ ರೋಗ ಅಸ್ಪತ್ರೆಗೆ ಸಾಮಾನ್ಯ ಹೊರರೋಗ ವಿಭಾಗ ಪ್ರಾರಂಭಿಸಲು ಸಿಬ್ಬಂದಿ ಮಂಜೂರು ಮಾಡುವುದು

4) ಮಂಡ್ಯ ಜಿಲ್ಲಾ ಆಸ್ಪತ್ರೆಯಲ್ಲಿ ತೀವ್ರ ಹೃದ್ರೋಗ ಘಟಕ ಸ್ಥಾಪನೆ (ಕಟ್ಟಡ)

5) ಜಿಲ್ಲಾ ಆಸ್ಪತ್ರೆಗಳಲ್ಲಿ ಟ್ರಾಮಾ ಚಿಕಿತ್ಸಾ ಕೇಂದ್ರಗಳನ್ನು ಸ್ಥಾಪನೆ (ಕಟ್ಟಡ)

6) ಜಿಲ್ಲಾ ಆಸ್ಪತ್ರೆಗಳಲ್ಲಿ ವೈದ್ಯಕೀಯ ದಾಖಲೆಗಳ ವಿಭಾಗಗಳ ಸ್ಥಾಪನೆ (ರಜಸ್ವ ಮತ್ತು ಕಟ್ಟಡ)

7) ಜಿಲ್ಲಾ ಆಸ್ಪತ್ರೆಗಳಲ್ಲಿ ಬಯೋ ಕೆಮಿಸ್ಟ್ರಿ ಮತ್ತು ಪ್ರಯೋಗಾಲಯಗಳಲ್ಲಿ ಹೆಚ್ಚಿನ ಅನುಕೂಲತೆ ಸ್ಥಾಪನೆ (ಕಟ್ಟಡ ಉಪಕರಣ ಮತ್ತು ಸಿಬ್ಬಂದಿ)

8) ಜಿಲ್ಲಾ ಆಸ್ಪತ್ರೆ, ತುಮಕೂರು ಇಲ್ಲಿಗೆ ಹೊಸ ಹೊರರೋಗಿ ವಿಭಾಗ ಮತ್ತು ಹೆಚ್ಚುವರಿ ಸಿಬ್ಬಂದಿಯನ್ನು ಮಂಜೂರು ಮಾಡುವುದು.

9) ಜಿಲ್ಲಾ ಆಸ್ಪತ್ರೆಗಳಲ್ಲಿ 10 ಹಾಸಿಗೆಗಳ ಸೌಲಭ್ಯವುಳ್ಳ ಡಿ–ಅಡಿಕ್ಷನ್ ಕೇಂದ್ರ ಸ್ಥಾಪನೆ. (3 ಘಟಕಗಳು, ಕಟ್ಟಡ)

10) ಜಿಲ್ಲಾ ಮತ್ತು ದೊಡ್ಡ ಆಸ್ಪತ್ರೆಗಳಲ್ಲಿ ನಾರಮ್ಸ್ ಪ್ರಕಾರ ಸಿಬ್ಬಂದಿ ವರ್ಗವನ್ನು ಹೆಚ್ಚಿಸುವುದು (ರಜಸ್ವ)

11) ತುರ್ತು ಮತ್ತು ಅಕಸ್ಮಿಕ ವಿಭಾಗ ಅಭಿವೃದ್ಧಿಪಡಿಸುವ ಬಗ್ಗೆ (ರಜಸ್ವ ಮತ್ತು ಕಟ್ಟಡ)

12) ಶೀತಲ ಕೊಠಡಿ ಮತ್ತು ಶವಾಗಾರಗಳನ್ನು ಅಭಿವೃದ್ಧಿಪಡಿಸುವ ಬಗ್ಗೆ (ರಾಜಸ್ವ ಮತ್ತು ಕಟ್ಟಡ)

13) ಆಸ್ಪತ್ರೆಗಳಲ್ಲಿರುವ ಅಡುಗೆ ಮನೆಗಳನ್ನು ಆಧುನೀಕರಿಸುವುದು (ರಾಜಸ್ವ ಮತ್ತು ಕಟ್ಟಡ)

14) ರಕ್ತನಿಧಿ ಕೇಂದ್ರಗಳನ್ನು ಆಧುನೀಕರಿಸಿ ಏಯ್ಡ್ಸ್ ರೋಗ ಸ್ಕ್ರೀನಿಂಗ್ ಸೌಲಭ್ಯವನ್ನು ಅಭಿವೃದ್ಧಿಪಡಿಸುವುದು.

15) ರೇಡಿಯಾಲಜಿ ವಿಭಾಗಗಳ ಮತ್ತು ತೀವ್ರ ಹೃದ್ರೋಗ ವಿಭಾಗಗಳನ್ನು ಅಭಿವೃದ್ಧಿ ಪಡಿಸುವುದು (ಕಟ್ಟಡ ಮತ್ತು ರಾಜಸ್ವ).

16) ನಿಯಮದಂತೆ ಅಂಬ್ಯುಲೆನ್ಸ್ ಸೇವಾ ಸೌಲಭ್ಯವನ್ನು ಒದಗಿಸುವುದು.

17) ಖಾಲಿ ಇರುವ ಅಗತ್ಯ ಸೇವಾ ಸಿಬ್ಬಂದಿ ವಸತಿಗೃಹಗಳು (ಕಟ್ಟಡ)

## ಹೈದರಾಬಾದ್ ಕರ್ನಾಟಕ ಅಭಿವೃದ್ಧಿ ಯೋಜನೆಯ ಕಾರ್ಯಕ್ರಮದ ಪ್ರಗತಿ ಭೌತಿಕ ಮತ್ತು ಆರ್ಥಿಕ

ಸರ್ಕಾರವು ತನ್ನ ಆದೇಶ ಸಂಖ್ಯೆ ಹೆಚ್‌ಎಫ್‌ಡಬ್ಲ್ಯೂ 354 ಸಿಜಿಎಂ 90, ದಿನಾಂಕ 13–7–1990 ಹಾಗೂ ಆದೇಶ ಸಂಖ್ಯೆ : ಹೆಚ್‌ಎಫ್‌ಡಬ್ಲ್ಯೂ 3 ಸಿಜಿಎಂ 91, ದಿನಾಂಕ : 21–12–1991ರಲ್ಲಿ ಹೈದರಾಬಾದ್ ಕರ್ನಾಟಕ ಅಭಿವೃದ್ಧಿ ಯೋಜನೆಯ ಕಾರ್ಯಕ್ರಮದಡಿಯಲ್ಲಿ ಆರೋಗ್ಯ ಇಲಾಖೆಯ ಕಟ್ಟಡ ಕಾಮಗಾರಿ, ಆಸ್ಪತ್ರೆಗಳಿಗೆ ಬೇಕಾಗಿರುವ ಉಪಕರಣಗಳು ಮತ್ತು ಸಲಕರಣೆಗಳ ಸರಬರಾಜಿಗೆ ಒಟ್ಟು ರೂ. 715-00 ಲಕ್ಷ ಒದಗಿಸಲಾಗಿತ್ತು. ಅದರಲ್ಲಿ ಆಸ್ಪತ್ರೆಯ ಕಟ್ಟಡ ಕಾಮಗಾರಿಕೆಗಳಿಗಾಗಿ ರೂ. 413.96 ಲಕ್ಷ ಮತ್ತು 301.04 ಲಕ್ಷ ರೂ.ಗಳನ್ನು ಆಸ್ಪತ್ರೆಗೆ ಬೇಕಾಗುವ ಸಲಕರಣೆಗಳು, ಉಪಕರಣಗಳು, ಕ್ಷ-ಕಿರಣ ಯಂತ್ರಗಳು, ವಾಹನಗಳು ಇತ್ಯಾದಿಗಳನ್ನು ಖರೀದಿಸಲು ಮರು ನಿಗದಿ ಮಾಡಿರುತ್ತಾರೆ. ಕಟ್ಟಡ ಕಾಮಗಾರಿಕೆಗಾಗಿ ಒದಗಿಸಿದ ಹಣದಲ್ಲಿ ಕಾರ್ಯಚರಣೆಯಲ್ಲಿದ್ದ ಕಟ್ಟಡ ಕಾಮಗಾರಿಕೆಗಳಿಗೆ ರೂ. 164.96 ಲಕ್ಷ ಹಾಗೂ ಹೊಸ ಕಾಮಗಾರಿಕೆಗಳಿಗೆ ರೂ. 249.00 ಲಕ್ಷವನ್ನು ಮತ್ತು ನಿಗಧಿಗೊಳಿಸಿರುತ್ತಾರೆ.

ತದನಂತರ, ಸರ್ಕಾರಿ ಆದೇಶ ಸಂಖ್ಯೆ ಹೆಚ್‌ಎಫ್‌ಡಬ್ಲ್ಯೂ 229 ಸಿಜಿಎಂ 92, ಬೆಂಗಳೂರು ದಿನಾಂಕ. 14-7-9.2ರ ಪ್ರಕಾರ 1992-93ನೇ ಸಾಲಿಗೆ ರೂ. 275.00 ಲಕ್ಷ ಹಣವನ್ನು ಕಟ್ಟಡ ಕಾಮಗಾರಿಗಳನ್ನು ಕೈಗೊಂಡ ಸಂಸ್ಥೆಗಳಿಗೆ ಈ ಕೆಳಗಿನಂತೆ ಒದಗಿಸಲಾಗಿದೆ.

| ಕ್ರಮ ಸಂಖ್ಯೆ | ಜಿಲ್ಲೆ | ಲೋಕೋಪಯೋಗಿ ಇಲಾಖೆ (ಲಕ್ಷ ರೂ.ಗಳಲ್ಲಿ) | ಕರ್ನಾಟಕ ಭೂ ಸೇನಾ ನಿಗಮ (ಲಕ್ಷ ರೂ.ಗಳಲ್ಲಿ | ಜಿಲ್ಲಾಪರಿಷತ್ (ಲಕ್ಷ ರೂ.ಗಳಲ್ಲಿ) | ಒಟ್ಟು ಒದಗಿಸಿದ ಹಣ (ಲಕ್ಷ ರೂ.ಗಳಲ್ಲಿ) |
|---|---|---|---|---|---|
| 1) | ಗುಲ್ಬರ್ಗಾ | 15.00 | 136.21 | 18.31 | -169.52 |
| 2) | ರಾಯಚೂರು | — | 13.55 | 15.00 | 28.55 |
| 3) | ಬಳ್ಳಾರಿ | 4.89 | 42.04 | — | 46.93 |
| 4) | ಬೀದರ್ | 24.00 | — | 6.00 | 30.00 |
| | | | | ಒಟ್ಟು ಮೊತ್ತ ರೂ. | 275.00 |

ಈ ಮೇಲ್ಕಂಡಂತೆ ಒದಗಿಸಿದ ಹಣದಲ್ಲಿ ತ್ರೈಮಾಸಿಕ ಅವಧಿಗೆ ಏಪ್ರಿಲ್ 1992 ರಿಂದ ಜೂನ್ 1992ರ ಅವಧಿಗೆ ರೂ. 65.00 ಲಕ್ಷವನ್ನು ಕಟ್ಟಡ ಕಾಮಗಾರಿ ಕೈಗೊಂಡ ಸಂಸ್ಥೆಗಳಿಗೆ ಈ ಕೆಳಕಂಡಂತೆ ನಿಗದಿಗೊಳಿಸಲಾಗಿದೆ.

| ಕ್ರಮ ಸಂಖ್ಯೆ | ಜಿಲ್ಲೆ | ಲೋಕೋಪಯೋಗಿ ಇಲಾಖೆ (ಲಕ್ಷ ರೂ.ಗಳಲ್ಲಿ) | ಕರ್ನಾಟಕ ಭೂ ಸೇನಾ ನಿಗಮ (ಲಕ್ಷ ರೂ.ಗಳಲ್ಲಿ) | ಜಿಲ್ಲಾ ಪರಿಷತ್ (ಲಕ್ಷ ರೂ.ಗಳಲ್ಲಿ) | ಒಟ್ಟು ಬಿಡುಗಡೆ ಹಣ (ಲಕ್ಷ ರೂ.ಗಳಲ್ಲಿ) |
|---|---|---|---|---|---|
| 1) | ಗುಲ್ಬರ್ಗಾ | 4.50 | 25.33 | 4.59 | 34.42 |
| 2) | ರಾಯಚೂರು | — | 4.08 | 2.00 | 6.08 |
| 3) | ಬಳ್ಳಾರಿ | 1.50 | 9.00 | — | 10.50 |
| 4) | ಬೀದರ್ | 12.00 | — | 2.00 | 14.00 |
| | | | ಒಟ್ಟು ಮೊತ್ತ | | 65.00 |

## ಆರೋಗ್ಯ ಇಲಾಖೆಯ ಕಟ್ಟಡ ಕಾಮಗಾರಿಗಳು

ಹೈದರಾಬಾದ್ ಕರ್ನಾಟಕ ಅಭಿವೃದ್ಧಿ ಯೋಜನೆಯ ಕಾರ್ಯಕ್ರಮದಲ್ಲಿ ಆಸ್ಪತ್ರೆಯ ಕಟ್ಟಡ ನಿರ್ಮಾಣ, ದುರಸ್ತಿ ಕಾರ್ಯ ಹಾಗೂ ಸಿಬ್ಬಂದಿ ವಸತಿ ಗೃಹಗಳ ನಿರ್ಮಾಣ ಕಾರ್ಯಗಳನ್ನು ಈ ಕೆಳಕಂಡ ಸಂಸ್ಥೆಗಳಿಗೆ ವಹಿಸಲಾಗಿದೆ.

| | | | | |
|---|---|---|---|---|
| 1) | ಕರ್ನಾಟಕ ಲೋಕೋಪಯೋಗಿ ಇಲಾಖೆ | — | 8 | ಕಾಮಗಾರಿಗಳ |
| 2) | ಕರ್ನಾಟಕ ಭೂ ಸೇನಾ ನಿಗಮ | — | 28 | –,– |
| 3) | ಜಿಲ್ಲಾ ಪರಿಷತ್ತು | — | 16 | –,– |

ಈ ಮೇಲಿನ ಕಟ್ಟಡ ಕಾಮಗಾರಿಕೆಗಳ ವೆಚ್ಚ ರೂ. 958.27 ಲಕ್ಷ ಎಂದು ಅಂದಾಜು ಮಾಡಲಾಗಿದೆ. ಈ ಸಂಸ್ಥೆಗಳು ಕಟ್ಟಡ ಕಾಮಗಾರಿಕೆ ಕೆಲಸಗಳನ್ನು ಕೈಗೊಳ್ಳಲು ಮತ್ತು ಕಾಮಗಾರಿಕೆಗಳನ್ನು ಪೂರೈಸಲು ಈ ಕೆಳಗಿನಂತೆ ಹಣ ಒದಗಿಸಬೇಕಾಗಿರುತ್ತದೆ.

| | | |
|---|---|---|
| 1) ಲೋಕೋಪಯೋಗಿ ಇಲಾಖೆ | — | ರೂ. 135.68 ಲಕ್ಷಗಳು |
| 3) ಕರ್ನಾಟಕ ಭೂಸೇನಾ ನಿಗಮ | — | ರೂ. 629.75 ಲಕ್ಷಗಳು |
| 3) ಜಿಲ್ಲಾ ಪರಿಷತ್‌ಗಳು | — | ರೂ. 172.88 ಲಕ್ಷಗಳು |

ಈ ಕಾರ್ಯಕ್ರಮದಡಿಯಲ್ಲಿ ಆರೋಗ್ಯ ಇಲಾಖೆಯ ಕಟ್ಟಡ ಕಾಮಗಾರಿಕೆಗಳಿಗಾಗಿ ದಿನಾಂಕ 31-10-92 ರ ವರೆಗೆ ಒಟ್ಟು ರೂ. 307.62 ಲಕ್ಷಗಳನ್ನು ವೆಚ್ಚ ಮಾಡಲಾಗಿದೆ. 1992-93ನೇ ಸಾಲಿನಲ್ಲಿ ಹೊಸ ಕಟ್ಟಡ ಕಾಮಗಾರಿಕೆಗಳನ್ನು ಕೈಗೊಳ್ಳಲು ಒಟ್ಟು ರೂ.368.28 ಲಕ್ಷ ಒದಗಿಸುವಂತೆ ಸರ್ಕಾರವನ್ನು ಕೋರಲಾಗಿದೆ.

ಈ ಕಾರ್ಯಕ್ರಮದಡಿಯಲ್ಲಿ ವಿವಿಧ ಸಂಸ್ಥೆಗಳು ಕೈಗೊಂಡಿರುವ ಕಟ್ಟಡ ಕಾಮಗಾರಿಕೆಗಳ ಪ್ರಗತಿ ಈ ಕೆಳಗಿನಂತಿವೆ.

| ಕಾಮಗಾರಿಕೆಗಳು | ಸಂಖ್ಯೆ |
|---|---|
| 1) ಪೂರ್ಣಗೊಂಡ ಕಾಮಗಾರಿಕೆಗಳು | 8 |
| 2) ಮುಕ್ತಾಯ ನಂತರದಲ್ಲಿರುವ ಕಾಮಗಾರಿಕೆಗಳು | 4 |
| 3) ನಿರ್ಮಾಣ ಹಂತದಲ್ಲಿರುವ ಕಾಮಗಾರಿಕೆಗಳು | 30 |
| 4) ಕಾರ್ಯಾರಂಭಗೊಳ್ಳಬೇಕಾದ ಕಾಮಗಾರಿಕೆಗಳು | 9 |
| 5) ಆಡಳಿತಾತ್ಮಕ ಮಂಜೂರಾತಿ ದೊರೆಯಬೇಕಾದ ಕಾಮಗಾರಿಕೆ | 1 |

ಈ ಕಾರ್ಯಕ್ರಮದಡಿಯಲ್ಲಿ ಕಾರ್ಯ ಕೈಗೊಂಡಿರುವ ಕಟ್ಟಡ ಕಾಮಗಾರಿಕೆಗಳ ವಿವರಗಳು ಈ ಕೆಳಕಂಡಂತಿರುತ್ತವೆ.

| | |
|---|---|
| 1) ಸಿಬ್ಬಂದಿ ವಸತಿ ಗೃಹದೊಂದಿಗೆ ಪ್ರಾಥಮಿಕ ಆರೋಗ್ಯ ಕೇಂದ್ರಗಳ ನಿರ್ಮಾಣ | 14 |
| 2) ಸಾರ್ವಜನಿಕ ಆಸ್ಪತ್ರೆ ಕಟ್ಟಡಗಳ ನಿರ್ಮಾಣ | 13 |
| 3) ಸಮುದಾಯ ಆರೋಗ್ಯ ಕೇಂದ್ರ ಕಟ್ಟಡಗಳ ನಿರ್ಮಾಣ | 3 |
| 4) ಜಿಲ್ಲಾ ಆಸ್ಪತ್ರೆ, ಗುಲ್ಬರ್ಗಾ ಮತ್ತು ಬೀದರ್ ಇಲ್ಲಿಗೆ ಹೆಚ್ಚುವರಿ ಕ್ಷಯರೋಗ ಕೇಂದ್ರ, ಆಹಾರ ಪ್ರಯೋಗಾಲಯ ಕಾಮಗಾರಿಕೆ ಹಾಗೂ ದುರಸ್ಥಿ | 22 |

## ಸಲಕರಣೆಗಳು ಮತ್ತು ಉಪಕರಣಗಳು :

ಈ ಕಾರ್ಯಕ್ರಮದಡಿಯಲ್ಲಿ ಜಿಲ್ಲಾ ಮಟ್ಟದ ಆಸ್ಪತ್ರೆ, ತಾಲ್ಲೂಕು ಮಟ್ಟದ ಆಸ್ಪತ್ರೆಗಳಿಗೆ ಪೀಠೋಪಕರಣಗಳು ವಾಹನಗಳು ಸಲಕರಣೆಗಳು ಹಾಗೂ ಉಪಕರಣೆಗಳನ್ನು ಒದಗಿಸಲು ಸರ್ಕಾರವು 1990-91 ಹಾಗೂ 91-92 ನೇ ಸಾಲಿಗೆ ಒಟ್ಟು ರೂ. 301.04 ಲಕ್ಷ ಒದಗಿಸಿತ್ತು. ಸರ್ಕಾರವು ಆದೇಶದಂತೆ ಸರ್ಕಾರವು ಮಂಜೂರ್ತಿ ಪಡೆದು ಅಗತ್ಯವಿರುವದ ಸಂಸ್ಥೆಗಳಿಗೆ ಬೇಕಾದ ಪೀಠೋಪಕರಣಗಳು ವಾಹನಗಳು ಸಲಕರಣೆಗಳು ಮತ್ತು ಉಪಕರಣಗಳನ್ನು ಸರಬರಾಜು ಮಾಡಲು ವ್ಯವಸ್ಥೆ ಮಾಡಲಾಗಿದೆ.

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಸಿಬ್ಬಂದಿ ವರ್ಗ ದಿನಾಂಕ 1-12-92ರಲ್ಲಿದ್ದಂತೆ

| ಕ್ರಮ ಸಂಖ್ಯೆ | ಹುದ್ದೆಗಳ ಹೆಸರು | ಮಂಜೂರಾದ ಹುದ್ದೆಗಳು | ಕೆಲಸ ಮಾಡುತ್ತಿರುವವರ ಸಂಖ್ಯೆ | ಖಾಲಿ ಇರುವ ಹುದ್ದೆಗಳ ಸಂಖ್ಯೆ |
|---|---|---|---|---|
| 1 | 2 | 3 | 4 | 5 |
| 1 | ನಿರ್ದೇಶಕರು, ಆರೋಗ್ಯ ಮತ್ತು ಕು. ಕ ಸೇವೆಗಳು | 1 | 1 | – |
| 2 | ನಿರ್ದೇಶಕರು, ಆರೋಗ್ಯ, ಶಿಕ್ಷಣ ಮತ್ತು ತರಬೇತಿ | 1 | – | 1 |
| 3 | ಅಪರ ನಿರ್ದೇಶಕರು, ಕುಟುಂಬ ಕಲ್ಯಾಣ ಮತ್ತು ತಾಯಿ ಮಕ್ಕಳ ಆರೋಗ್ಯ | 1 | 1 | – |
| 4 | ಪ್ರಾಜೆಕ್ಟ್ ಕೋ-ಆರ್ಡಿನೇಟರ್ (ಐಪಿಪಿ) | 1 | – | 1 |
| 5 | ಅಪರ ನಿರ್ದೇಶಕರು (ಏಯ್ಡ್ಸ್) | 1 | – | 1 |
| 6 | ಆರೋಗ್ಯಾಧಿಕಾರಿ (ಬೆಂಗಳೂರು ಮಹಾನಗರಪಾಲಿಕೆ ಜಂಟಿ ನಿರ್ದೇಶಕರು ಕಾರ್ಯ ನಿರ್ವಹಿಸುತ್ತಿರುತ್ತಿರೆ) | 1 | 1 | – |
| 7 | ಜಂಟಿ ನಿರ್ದೇಶಕರುಗಳು | 16 | 12 | 4 |
| 8 | ಆರೋಗ್ಯಾಧಿಕಾರಿಗಳು, (ದರ್ಜೆ-1 ಹಿರಿಯ) | 59 | 44 | 15 |
| 9 | ಶಸ್ತ್ರ ಚಿಕಿತ್ಸಕರುಗಳು | 125 | 113 | 12 |
| 10 | ಅಧೀಕ್ಷಕರುಗಳು, ಟಿ. ಬಿ. ಆಸ್ಪತ್ರೆ | 10 | 8 | 2 |
| 11 | ಆರೋಗ್ಯಾಧಿಕಾರಿಗಳು, ದರ್ಜೆ-1 (ಕಿರಿಯ) | 440 | 328 | 112 |
| 12 | ಜಂಟಿ ನಿರ್ದೇಶಕರು (ವಾ. ಶಿ. ಸಂ) | 1 | 1 | – |
| 13 | ಆರೋಗ್ಯಾಧಿಕಾರಿಗಳು ಹಾಗೂ ಸಹಾಯಕ ಶಸ್ತ್ರ ಚಿಕಿತ್ಸಕರುಗಳು | 3781 | 3285 | 496 |
| 14 | ಮುಖ್ಯ ಆಡಳಿತಾಧಿಕಾರಿ | 1 | 1 | – |
| 15 | ಮುಖ್ಯ ಲೆಕ್ಕಪತ್ರಾಧಿಕಾರಿಗಳು ಹಾಗೂ ಆರ್ಥಿಕ ಸಲಹೆಗಾರರು | 1 | 1 | – |
| 16 | ಉಪ ನಿರ್ದೇಶಕರು (ಪೌಷ್ಟಿಕ ಆಹಾರ) | 1 | 1 | – |
| 17 | ದಂತ ಶಸ್ತ್ರಚಿಕಿತ್ಸಕರುಗಳು | 2 | 1 | 1 |
| 18 | ಉಪದಂತ ಶಸ್ತ್ರಚಿಕಿತ್ಸಕರುಗಳು | 33 | 20 | 13 |
| 19 | ಸಹಾಯಕ ದಂತ ಶಸ್ತ್ರಚಿಕಿತ್ಸಕರುಗಳು | 120 | 85 | 35 |
| 20 | ಮುಖ್ಯ ಫಾರ್ಮಸಿಸ್ಟ್‌ಗಳು | 17 | 12 | 5 |
| 21 | ಪದವೀಧರ ಫಾರ್ಮಸಿಸ್ಟ್‌ಗಳು | 39 | 18 | 21 |
| 22 | ಚೀಫ್ ಕೆಮಿಸ್ಟ್ ಮತ್ತು ಪಬ್ಲಿಕ್ ಅನಲಿಸ್ಟ್‌ಗಳು | 1 | 1 | – |
| 23 | ಹಿರಿಯ ಕೆಮಿಸ್ಟ್ ಮತ್ತು ಪಬ್ಲಿಕ್ ಅನಲಿಸ್ಟ್‌ಗಳು | 7 | 6 | 1 |
| 24 | ಕೆಮಿಸ್ಟ್ : ಫುಡ್ ಅನಲಿಸ್ಟ್‌ಗಳು | 11 | 7 | 4 |
| 25 | ಸಹಾಯಕ ಪೌಷ್ಟಿಕ ಆಹಾರ ಅಧಿಕಾರಿಗಳು | 5 | 2 | 3 |
| 26 | ಸೈಂಟಿಫಿಕ್ ಆಫೀಸರ್ | 1 | 1 | – |
| 27 | ಹೆಲ್ತ್ ಎಕ್ವಿಪ್‌ಮೆಂಟ್ ಆಫೀಸರುಗಳು | 2 | 1 | 1 |
| 28 | ಸಹಾಯಕ ಎಕ್ಸಿಕ್ಯೂಟಿವ್ ಇಂಜಿನಿಯರ್ (ವ್ಯಾಕ್ಸಿನ್ ಇನ್‌ಸ್ಟಿಟ್ಯೂಟ್ ಬೆಳಗಾವಿ) | 1 | – | 1 |
| 29 | ಯೋಜನಾಧಿಕಾರಿ | 1 | 1 | – |
| 30 | ಸಹಾಯಕ ಉಪ ನಿರ್ದೇಶಕರು (ಆ.ಶಿ. ಮತ್ತು ಶಾ.ಅ) | 1 | 1 | – |

| 1 | 2 | 3 | 4 | 5 |
|---|---|---|---|---|
| 31 | ಉಪ ನಿರ್ದೇಶಕರು (ಎಸ್.ಹೆಚ್.ಇ.ಯು) | 1 | 1 | – |
| 32 | ತಾಂತ್ರಿಕ ಅಧಿಕಾರಿ (ಶ್ರ.ಜಾ) | 1 | 1 | – |
| 33 | ತಾಂತ್ರಿಕ ಅಧಿಕಾರಿ (ಎಫ್.ಎಸ್.ಡಿ.ಸಿ.) | 1 | – | 1 |
| 34 | ತಾಂತ್ರಿಕ ಅಧಿಕಾರಿ (ಗಾಯಿಟರ್) | 1 | 1 | – |
| 35 | ತಾಂತ್ರಿಕ ಅಧಿಕಾರಿ (ವಸ್ತುಪ್ರದರ್ಶನ) | 1 | 1 | – |
| 36 | ಉಪ ನಿರ್ದೇಶಕರು (ಫಾರ್ಮಸಿ) | 1 | 1 | – |
| 37 | ಉಪ ನಿರ್ದೇಶಕರು (ಸಾರಿಗೆ) | 1 | – | 1 |
| 38 | ಹಿರಿಯ ಫಿಸಿಸ್ಟ್‌ಗಳು | 2 | 1 | 1 |
| 39 | ಹಿರಿಯ ಎಂಟಮಾಲಜಿಸ್ಟ್‌ಗಳು | 3 | – | 3 |
| 40 | ಬಯೋ ಕೆಮಿಸ್ಟ್ | 2 | – | 2 |
| 41 | ಸಹಾಯಕ ಎಂಟಮಾಲಜಿಸ್ಟ್‌ಗಳು | 6 | 5 | 1 |
| 42 | ಮೈಕ್ರೋ ಬಯಾಲಜಿಸ್ಟ್ | 1 | – | 1 |
| 43 | ಲೆ ಸೆಕ್ರೆಟರಿ : ಪತ್ರಾಂಕಿತ ಸಹಾಯಕರುಗಳು | 64 | 32 | 32 |
| 44 | ಆಡಳಿತಾಧಿಕಾರಿಗಳು | 4 | 1 | 3 |
| 45 | ವೈದ್ಯಕೀಯ ದಾಖಲಾತಿ ಅಧಿಕಾರಿಗಳು | 3 | 1 | 2 |
| 46 | ಸರ್ವೀಸ್ ಇಂಜಿನಿಯರುಗಳು | 20 | 8 | 12 |
| 47 | ಅಧೀಕ್ಷಕ ದಾದಿಯರು, ದರ್ಜೆ–1 | 47 | 9 | 38 |
| 48 | ಅಧೀಕ್ಷಕ ದಾದಿಯರುಗಳು, ದರ್ಜೆ–II | 308 | 260 | 48 |
| 49 | ನರ್ಸಿಂಗ್ ಟ್ಯೂಟರ್‌ಗಳು | 68 | 61 | 7 |
| 50 | ಹಿರಿಯ ದಾದಿಯರು | 600 | 537 | 63 |
| 51 | ಪ್ರಾಂಶುಪಾಲರು ದಾದಿಯರ ಶಾಲೆ | 9 | 6 | 3 |
| 52 | ಉಪನ್ಯಾಸಕರು, ದಾದಿಯರ ಮಹಾವಿದ್ಯಾಲಯ | 5 | 3 | 2 |
| 53 | ಪ್ರಾಧ್ಯಾಪಕರು, ದಾದಿಯರ ಮಹಾವಿದ್ಯಾಲಯ | 5 | 3 | 2 |
| 54 | ಸಹಾಯಕ ಪ್ರಾಧ್ಯಾಪಕರು, ದಾದಿಯರ ಮಹಾವಿದ್ಯಾಲಯ | 5 | 3 | 2 |
| 55 | ಪ್ರಾಂಶುಪಾಲರು, ದಾದಿಯರ ಮಹಾವಿದ್ಯಾಲಯ | 1 | 1 | – |
| 56 | ಕ್ಲಿನಿಕಲ್ ಇನ್‌ಸ್ಟ್ರಕ್ಟರುಗಳು, ದಾದಿಯರ ಮಹಾವಿದ್ಯಾಲಯ | 4 | 4 | |
| 57 | ಶುಶ್ರೂಷಕಿಯರು | 4113 | 3951 | 162 |
| 58 | ಹಿರಿಯ ಆರೋಗ್ಯ ಸಹಾಯಕರುಗಳು | 1221 | 1113 | 108 |
| 59 | ಹಿರಿಯ ಆರೋಗ್ಯ ಪರಿವೀಕ್ಷಕರುಗಳು, ಗ್ರೂಪ್–ಸಿ | 76 | 70 | 6 |
| 60 | ಹಿರಿಯ ಆರೋಗ್ಯ ಪರಿವೀಕ್ಷಕರುಗಳು, ಗ್ರೂಪ್–ಬಿ | 8 | 2 | 6 |
| 61 | ಸಹಾಯಕ ಕುಷ್ಠರೋಗಾಧಿಕಾರಿಗಳು | 13 | – | 13 |
| 62 | ಹಿರಿಯ ವೈದ್ಯೇತರ ಪರಿವೀಕ್ಷಕರುಗಳು | 102 | 95 | 7 |
| 63 | ಕಿರಿಯ ವೈದ್ಯೇತರ ಪರಿವೀಕ್ಷಕರುಗಳು | 184 | 85 | 99 |
| 64 | ಕಿರಿಯ ಆರೋಗ್ಯ ಸಹಾಯಕರುಗಳು | 5556 | 4853 | 703 |
| 65 | ಅರೆ ವೈದ್ಯಕೀಯ ಕಾರ್ಯಕರ್ತರುಗಳು | 1231 | 799 | 432 |
| 66 | ಹಿರಿಯ ಪ್ರಯೋಗಶಾಲಾ ತಂತ್ರಜ್ಞರುಗಳು | 303 | 255 | 48 |
| 67 | ಕಿರಿಯ ಪ್ರಯೋಗಶಾಲಾ ತಂತ್ರಜ್ಞರುಗಳು | 1627 | 1007 | 620 |
| 68 | ಕ್ಷ–ಕಿರಣ ತಂತ್ರಜ್ಞರುಗಳು | 249 | 238 | 11 |
| 69 | ರೇಡಿಯೋಗ್ರಾಫರ್‌ಗಳು | 42 | 34 | 8 |

| 1 | 2 | 3 | 4 | 5 |
|---|---|---|---|---|
| 70 | ರಿಫ್ರಾಕ್ಷನಿಸ್ಟ್‌ಗಳು | 347 | 295 | 52 |
| 71 | ಆರ್ಥೋಟಿಷಿಸ್ಟ್‌ಗಳು | 7 | 7 | – |
| 72 | ಸಹಾಯಕ ವೈದ್ಯ ದಾಖಲಾತಿ ಅಧಿಕಾರಿಗಳು | 11 | 10 | 1 |
| 73 | ವೈದ್ಯ ದಾಖಲಾತಿ ತಂತ್ರಜ್ಞರುಗಳು | 28 | 21 | 7 |
| 74 | ಫಿಸಿಯೋಥೆರಪಿಸ್ಟ್‌ಗಳು (ಸಾಮಾನ್ಯ) | 33 | 21 | 12 |
| 75 | ಫಿಸಿಯೋಥೆರಪಿಸ್ಟ್ (ಕುಷ್ಠರೋಗ) | 52 | 28 | 24 |
| 76 | ಎಲೆಕ್ಟ್ರೀಷಿಯನ್‌ಗಳು | 44 | 38 | 6 |
| 77 | ಕ್ಲಿನಿಕಲ್ ಸೈಕಾಲಜಿಸ್ಟ್‌ಗಳು | 12 | 7 | 5 |
| 78 | ಡೆಂಟಲ್ ಮೆಕಾನಿಕ್‌ಗಳು | 31 | 28 | 3 |
| 79 | ಡೆಂಟಲ್ ಹೈಜಿಯನಿಸ್ಟ್‌ಗಳು | 9 | 8 | 1 |
| 80 | ಡೆಯಟೀಷಿಯಿನ್‌ಗಳು | 8 | 6 | 2 |
| 81 | ಜೂನಿಯರ್ ಕೆಮಿಸ್ಟ್‌ಗಳು | 24 | 8 | 16 |
| 82 | ಸೋಷಿಯಲ್ ವರ್ಕರ್‌ಗಳು (ಎಸ್.ಟಿ.ಡಿ.) | 26 | 22 | 4 |
| 83 | ಮೆಕ್ಯಾನಿಕ್ಸ್ ಕ್ಲಾಸ್–1 (ಕಿರಿಯ) | 3 | 3 | – |
| 84 | ಆಕ್ಯುಪೇಷನಲ್ ಥೆರಪಿಸ್ಟ್‌ಗಳು | 5 | – | 5 |
| 85 | ಪಂಪ್ ಮೆಕ್ಯಾನಿಕ್‌ಗಳು | 1 | 1 | – |
| 86 | ವೈರ್‌ಮ್ಯಾನ್ | 1 | 1 | – |
| 87 | ಮಾಡಲರ್‌ಗಳು | 4 | 4 | – |
| 88 | ಕಲೆ ಹಾಗೂ ಛಾಯಗ್ರಾಹಕರುಗಳು | 8 | 1 | 7 |
| 89 | ಕಲೆಗಾರರುಗಳು | 2 | – | 2 |
| 90 | ಡ್ರಾಫ್ಟ್‌ಮನ್ | 1 | – | 1 |
| 91 | ಫಿಜಿಕಲ್ ಕಲ್ಚರ್ ಇನ್‌ಸ್ಟ್ರಕ್ಟರ್‌ಗಳು | 4 | 4 | – |
| 92 | ಆಟೋ ಕ್ಲೇವ್ ಮೆಕ್ಯಾನಿಕ್‌ಗಳು | 2 | 2 | – |
| 93 | ಬಾಯ್ಲರ್ ಅಟೆಂಡರ್ | 1 | 1 | – |
| 94 | ಕತ್ತಲೆ ಕೊಠಡಿ ಸಹಾಯಕರ್ | 3 | – | 3 |
| 95 | ಎಂಟಮಾಲಜಿಕಲ್ ಅಸಿಸ್ಟೆಂಟ್‌ಗಳು | 4 | 2 | 2 |
| 96 | ಸೈಂಟಿಫಿಕ್ ಅಸಿಸ್ಟೆಂಟ್‌ಗಳು | 4 | 3 | 1 |
| 97 | ಏರ್‌ಕಂಡೀಷನ್ ಅಪರೇಟರ್‌ಗಳು | 2 | 1 | 1 |
| 98 | ಅಧೀಕ್ಷಕರುಗಳು (ತಾಂತ್ರಿಕ) | 1 | 1 | – |
| 99 | ಪ್ರಿಂಟಿಂಗ್ ಇನ್‌ಸ್ಟ್ರಕ್ಟರ್‌ಗಳು | 1 | 1 | – |
| 100 | ವೀವಿಂಗ್ ಇನ್‌ಸ್ಟ್ರಕ್ಟರ್‌ಗಳು | 1 | 1 | – |
| 101 | ಲೂಮ್ ಮೆಕಾನಿಕ್ | 1 | 1 | – |
| 102 | ಹೆಲ್ತ್ ಎಕ್ವಿಪ್‌ಮೆಂಟ್ ಅಂಡ್ ರಿಪೇರ್ ಸೂಪರ್‌ವೈಸರ್ | 4 | 1 | 3 |
| 103 | ಜೂನಿಯರ್ ಇಂಜಿನಿಯರ್ | 1 | 1 | – |
| 104 | ಕ್ರಾಫ್ಟ್‌ಮೆನ್ | 1 | 1 | – |
| 105 | ಉಪ ಸಂಪಾದಕ | 1 | 1 | – |
| 106 | ಹೋಂ ಸೈನ್ಸ್ ಅಸಿಸ್ಟೆಂಟ್ | 1 | 1 | – |
| 107 | ಸಿಲ್ಕ್ ಸ್ಕ್ರೀನ್ ಟೆಕ್ನೀಷಿಯನ್ | 1 | 1 | – |
| 108 | ಪ್ರೊಸ್ಥೆಟಿಕ್ ಟೆಕ್ನೀಷಿಯನ್ ದರ್ಜೆ–2 | 2 | 1 | 1 |
| 109 | ಲೆದರ್ ವರ್ಕರ್‌ಗಳು | 2 | 1 | 1 |
| 110 | ಆಪ್ಟಿಕಲ್ ಮೆಕಾನಿಕ್ | 1 | 1 | – |
| 111 | ಸೈಕಿಯಾಟ್ರಿಕ್ ಸೋಷಿಯಲ್ ವರ್ಕರ್ | 1 | – | 1 |

| | | | | |
|---|---|---|---|---|
| 112 | ಉಪಾಧ್ಯಾಯರು | 1 | 1 | – |
| 113 | ಸ್ಪೀಚ್‌ಪೆಥಾಲಜಿಸ್ಟ್ ಅಂಡ್ ಆಡಿಯೋಲಾಜಿಸ್ಟ್ | 1 | – | 1 |
| 114 | ಸೂಪರಿನ್‌ಟೆಂಡೆಂಟ್ (ವೆಟರ್‌ನರಿ) | 1 | – | 1 |
| 115 | ಸ್ಪೀಚ್ ಥೆರಾಪಿಸ್ಟ್ | 1 | – | 1 |
| 116 | ಕಾರ್‌ಪೆಂಟರ್‌ಗಳು (ಬಡಿಗಿ) | 3 | 2 | 1 |
| 117 | ರೆಫ್ರಿಜಿರೇಟರ್ ಮೆಕ್ಯಾನಿಕ್‌ಗಳು | 3 | 1 | 2 |
| 118 | ಹಿರಿಯ ಫಾರ್ಮಸಿಸ್ಟ್ | 443 | 404 | 39 |
| 119 | ಕಿರಿಯ ಫಾರ್ಮಸಿಸ್ಟ್ | 1983 | 1622 | 361 |
| 120 | ಚಾಲಕರು | 1053 | 925 | 128 |
| 121 | ಮಾಸ್ಟರ್ ಆರ್ಟಿಸಾನ್ | 30 | 15 | 15 |
| 122 | ಸ್ಕಿಲ್ಡ್ ಮೆಕ್ಯಾನಿಕ್‌ಗಳು | 16 | 7 | 9 |
| 123 | ಸ್ಕಿಲ್ಡ್ ಟ್ರೇಡ್ಸ್‌ಮೆನ್ | 17 | 5 | 12 |
| 124 | ಸೆಮಿ ಸ್ಕಿಲ್ಡ್ ಆರ್ಟಿಸಾನ್ | 40 | 29 | 11 |
| 125 | ಆರ್ಥೋ ಟೆಕ್ನೀಷಿಯನ್‌ಗಳು | 2 | 1 | 1 |
| 126 | ಡಯಾಲಿಸಿಸ್ ಥೆರಾಪಿಸ್ಟ್‌ಗಳು | 2 | – | 2 |
| 127 | ಜ್ಯೂನಿಯರ್ ಮೆಕ್ಯಾನಿಕ್‌ಗಳು | 10 | 5 | 5 |
| 128 | ಎಲೆಕ್ಟ್ರೀಷಿಯನ್ (ಟ್ರಾನ್ಸ್‌ಪೋರ್ಟ್) | 8 | 6 | 2 |
| 129 | ಪಾರ್ಟ್ಸ್ ಮೆನ್ | 2 | – | 2 |
| 130 | ಡ್ರೈವರ್‌ಕಮ್ ಮೆಕ್ಯಾನಿಕ್‌ಗಳು | 2 | – | 2 |
| 131 | ಕ್ಲೀನರ್‌ಗಳು | 145 | 123 | 22 |
| 132 | ಲೇಡಿಹೌಸ್ ಕೀಪರ್ಸ್‌ಗಳು | 17 | 12 | 5 |
| 133 | ಕಛೇರಿ ಅಧೀಕ್ಷಕರುಗಳು | 292 | 265 | 27 |
| 134 | ಶೀಘ್ರಲಿಪಿಗಾರರು | 118 | 92 | 26 |
| 135 | ಕಿರಿಯ ಶೀಘ್ರಲಿಪಿಗಾರರು | 79 | 60 | 19 |
| 136 | ಪ್ರಥಮ ದರ್ಜೆ ಸಹಾಯಕರುಗಳು | 1809 | 1186 | 623 |
| 137 | ದ್ವಿತೀಯ ದರ್ಜೆ ಸಹಾಯಕರುಗಳು | 1357 | 1317 | 40 |
| 138 | ಬೆರಳಚ್ಚುಗಾರರು | 308 | 301 | 7 |
| 139 | ಬೆರಳಚ್ಚುಗಾರರು ಹಾಗೂ ಸಹಾಯಕರು | 289 | 173 | 116 |
| 140 | ಹಿರಿಯ ಬೆರಳಚ್ಚುಗಾರರು | 49 | 13 | 36 |
| 141 | ಹಿರಿಯ ಗ್ರಂಥಪಾಲಕರುಗಳು | 6 | 5 | 1 |
| 142 | ಗ್ರಂಥಪಾಲಕರು ದರ್ಜೆ–1 | 3 | 2 | 1 |
| 143 | ಗ್ರಂಥಪಾಲಕರು, ದರ್ಜೆ–2 | 3 | 2 | 1 |
| 144 | ಗ್ರಂಥಪಾಲಕ ಸಹಾಯಕರುಗಳು | 3 | 2 | 1 |
| 145 | ಶಾರೀರಿಕ ಶಿಕ್ಷಣ ಪ್ರಾಧ್ಯಾಪಕಿಯರು ದರ್ಜೆ–1 (ಸಾಆ) | 71 | 50 | 21 |
| 146 | ಶಾ.ಶಿ.ಪ್ರಾಧ್ಯಾಪಕರು, ದರ್ಜೆ–2 (ಸಾಆ) | 89 | 60 | 29 |
| 147 | ಮಹಿಳಾ ಸಂದರ್ಶಕಿಯರುಗಳು | 1219 | 1105 | 114 |
| 148 | ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರುಗಳು | 9137 | 8584 | 553 |
| 149 | ಜಿಲ್ಲಾ ಆರೋಗ್ಯ ಶಿಕ್ಷಣಾಧಿಕಾರಿಗಳು | 21 | 10 | 11 |
| 150 | ಆರೋಗ್ಯ ಶಿಕ್ಷಣಾಧಿಕಾರಿಗಳು ಆರೋಗ್ಯ ಶಿಕ್ಷಣ ಬೋಧಕರು ಸಮಾಜ ವಿಜ್ಞಾನ ಬೋಧಕರು ಸೋಸಿಯಲ್ ಸೈಂಟಿಸ್ಟ್ | 10 | 9 | 1 |
| 151 | ಉಪ ಆರೋಗ್ಯ ಶಿಕ್ಷಣಾಧಿಕಾರಿಗಳು | 84 | 73 | 11 |

| 1 | 2 | 3 | 4 | 5 |
|---|---|---|---|---|
| 152 | ಬ್ಲಾಕ್ ಮಟ್ಟದ ಆರೋಗ್ಯ ಶಿಕ್ಷಣಾಧಿಕಾರಿಗಳು | 765 | 414 | 351 |
| 153 | ಪ್ರೊಜೆಕ್ಷನಿಸ್ಟ್‌ಗಳು | 39 | 37 | 2 |
| 154 | ಉಪನ್ಯಾಸಕರು, ಆರೋಗ್ಯ ಶಿಕ್ಷಣ ಮತ್ತು ಕುಟುಂಬ ಕಲ್ಯಾಣ | 4 | 4 | – |
| 155 | ಸಹಾಯಕ ಸಂಪಾದಕರುಗಳು | 2 | 2 | – |
| 156 | ಸಂಪಾದಕರು | 1 | 1 | – |
| 157 | ಕ್ಷೇತ್ರ ಪ್ರಚಾರ ಅಧಿಕಾರಿ | 1 | 1 | – |
| 158 | ಜನಸಂಖ್ಯಾ ತಜ್ಞರು | 1 | 1 | – |
| 159 | ಉಪಸಾರಿಗೆ ಅಧಿಕಾರಿ | 1 | – | 1 |
| 160 | ಉಪ ನಿರ್ದೇಶಕರು (ವಾರ್ತೆ) | 1 | 1 | – |
| 161 | ಹಿರಿಯ ಸಹಾಯಕ ನಿರ್ದೇಶಕರು (ಶುಶ್ರೂಷ) | 1 | 1 | – |
| 162 | ವಾಹನ ಆಡಳಿತ ನಿಯಂತ್ರಣಾಧಿಕಾರಿ | 1 | 1 | – |
| 163 | ವರ್ಕ್ಸ್ ಮ್ಯಾನೇಜರ್‌ಗಳು | 2 | 2 | – |
| 164 | ಅಂಕಿಅಂಶಗಳ ಅಧಿಕಾರಿಗಳು | 5 | 4 | 1 |
| 165 | ಸಾರ್ವಜನಿಕ ಆರೋಗ್ಯ ಶುಶ್ರೂಷ ಶಿಕ್ಷಕರು | 4 | 4 | – |
| 166 | ಕಾರ್ಯಕ್ರಮದ ಸಹಾಯಕ | 1 | 1 | – |
| 167 | ತಾಂತ್ರಿಕ ಸಹಾಯಕ, ಕಿರಿಯ ಇಂಜಿನಿಯರ್ | 2 | 2 | – |
| 168 | ಸಹಾಯಕ ನಿರ್ದೇಶಕರು (ಮುದ್ರಣ) | 1 | 1 | – |
| 169 | ಪರಿವೀಕ್ಷಕರು (ಮುದ್ರಣ) | 1 | 1 | – |
| 170 | ಸಹಾಯಕ ಅಂಕಿಅಂಶಗಳ ಅಧಿಕಾರಿ | 1 | – | 1 |
| 171 | ಅಂಕಿ ಅಂಶಗಳ ಅಧಿಕಾರಿ | 1 | 1 | – |
| 172 | ಹಿರಿಯ ಪರಿವೀಕ್ಷಕರು, ಸ್ಟೀವರ್ಡ್ (ಕುಷ್ಠರೋಗ) | 1 | 1 | – |
| 173 | ಮುಖ್ಯ ತಂತ್ರಜ್ಞರುಗಳು | 2 | 1 | 1 |
| 174 | ಸೀನಿಯರ್ ಪ್ರೊಜೆಕ್ಷನಿಸ್ಟ್ ಸೀನಿಯರ್ ಆಪರೇಟರ್ | 1 | – | 1 |
| 175 | ಛಾಯಾಗ್ರಾಹಕರು | 1 | 1 | – |
| 176 | ಎಲೆಕ್ಟ್ರಿಕಲ್ ಸೂಪರ್‌ವೈಸರ್ | 1 | – | 1 |
| 177 | ಆರ್ಟಿಸ್ಟ್ ಕಮ್ ರಿಟಚರ್ | 1 | 1 | – |
| 178 | ಸಹಾಯಕ ಅಂಕಿಅಂಶಗಳ ಅಧಿಕಾರಿಗಳು | 34 | 34 | – |
| 179 | ಸೀನಿಯರ್ ಎಲೆಕ್ಟ್ರೀಷಿಯನ್ | 1 | – | 1 |
| 180 | ಸೀನಿಯರ್ ಕಂಪೋಜಿಟರ್ | 1 | 1 | – |
| 181 | ಹಿರಿಯ ತಾಂತ್ರಿಕ ಸಹಾಯಕ | 2 | – | 2 |
| 182 | ಪ್ರೋಸೆಸ್ ಆಪರೇಟರ್ | 1 | 1 | – |
| 183 | ಆರ್ಥೋಟಿಕ್ ಟೆಕ್ನೀಷಿಯನ್ ಗ್ರೇಡ್–2 | 2 | 2 | – |
| 184 | ಆಫ್‌ಸೆಟ್ ಪ್ಲೇಟ್ ಮೇಕರ್ | 1 | 1 | – |
| 185 | ಆಫ್‌ಸೆಟ್ ಪ್ರಿಂಟರ್‌ಗಳು | 2 | 2 | – |
| 186 | ಆಫ್‌ಸೆಟ್ ಸಹಾಯಕ ಪ್ರಿಂಟರ್‌ಗಳು | 2 | 2 | – |
| 187 | ಸೀನಿಯರ್ ಆಫ್‌ಸೆಟ್ ಪ್ರಿಂಟರ್ | 1 | 1 | – |
| 188 | ಅಸಿಸ್ಟೆಂಟ್ ಪ್ರೋಸೆಸ್ ಆಪರೇಟರ್ | 1 | 1 | – |
| 189 | ಸೀನಿಯರ್ ಪ್ರೂಫ್ ಎಕ್ಸಾಮಿನರ್ | 1 | 1 | – |
| 190 | ಜೂನಿಯರ್ ಪ್ರೂಫ್ ಎಕ್ಸಾಮಿನರ್‌ಗಳು | 2 | 2 | – |
| 191 | ಕಂಪೋಸಿಟರ್ | 1 | 1 | – |
| 192 | ಜೂನಿಯರ್ ಕಂಪೋಸಿಟರ್‌ಗಳು | 4 | 4 | – |
| 193 | ಸೀನಿಯರ್ ಬೈಂಡರ್‌ಗಳು | 1 | 1 | – |

| 1 | 2 | 3 | 4 | 5 |
|---|---|---|---|---|
| 194 | ಮೆಕ್ಯಾನಿಕ್ ಬೈಂಡರ್ | 1 | 1 | – |
| 195 | ನೀಡ್ಲ ವರ್ಕ್ ಟೀಚರ್ | 1 | 1 | – |
| 196 | ಲೂಮ್ ಮೆಕಾನಿಕ್ | 1 | 1 | – |
| 197 | ಬೈಂಡರ್‌ಗಳು | 3 | 2 | 1 |
| 198 | ಗ್ರೂಪ್–ಡಿ ಜವಾನರುಗಳು | 762 | | |
| 199 | ಹೈಡ್ರೊ ಎಲೆಕ್ಟ್ರಿಕ್ ಅಪರೇಟರ್‌ಗಳು | 48 | | |
| 200 | ಬಾಯ್ಲರ್ ಅಟೆಂಡರ್‌ಗಳು | 60 | | |
| 201 | ಹವಲ್ದಾರ್‌ಗಳು | 17 | | |
| 202 | ಇನ್‌ಸೆಕ್ಟ್ ಕಲೆಕ್ಟರ್‌ಗಳು | 162 | | |
| 203 | ಕ್ಷ–ಕಿರಣ ಸಹಾಯಕರಗಳು | 216 | | |
| 204 | ಲಿಫ್ಟ್ ಅಟೆಂಡರ್‌ಗಳು | 7 | | |
| 205 | ಓ. ಟಿ. ಅಟೆಂಡರ್‌ಗಳು | 62 | | |
| 206 | ಡಾರ್ಕ್ ರೂಮ್ ಅಸಿಸ್ಟೆಂಟ್‌ಗಳು | 44 | | |
| 207 | ಸಹಾಯಕರುಗಳು | 303 | | |
| 208 | ಕಿರಿಯ ತಾಂತ್ರಿಕ ಸಹಾಯಕರುಗಳು | 24 | | |
| 209 | ಧಫೇದಾರ್, ಜಮೇದಾರ್‌ಗಳು | 23 | | |
| 210 | ಪ್ರಯೋಗಶಾಲ ಸಹಾಯಕರುಗಳು | 186 | | |
| 211 | ಶಸ್ತ್ರಚಿಕಿತ್ಸೆ ಸಹಾಯಕರುಗಳು | 604 | | |
| 212 | ಅಸಿಸ್ಟೆಂಟ್ ಬೈಂಡರ್ಸ್‌ಗಳು | 10 | | |
| 213 | ಜೂನಿಯರ್ ಕಂಪೋಸಿಟರ್ಸ್‌ಗಳು | 4 | | |
| 214 | ಅಸಿಸ್ಟೆಂಟ್ ಪ್ಲೇಟ್ ಗ್ರೈಂಡರ್ | 1 | | |
| 215 | ಸೆಮಿಸ್ಕಿಲ್ಸ್ ಆರ್ಟಿಸನ್ : ಹೆಲ್ಪರ್ ಕಮ್–ಕುಕ್ | 60 | | |
| 216 | ಸ್ಕಿಲ್ಡ್ ಆರ್ಟಿಸನ್ | 129 | | |
| 217 | ಪ್ರಾಣಿಗಳ ಸಹಾಯಕರುಗಳು | 126 | | |
| 218 | ಮೋಚಿ | 42 | | |
| 219 | ವಾರ್ಪರ್‌ಗಳು | 78 | | |
| 220 | ಕನ್‌ಸರ್‌ವೆನ್ಸಿ ಓವರ್‌ಸೀರ್‌ಗಳು | 37 | | |
| 221 | ಹೆಡ್ ಸ್ಟೇಬಲ್ ಮ್ಯಾನ್ | 38 | | |
| 222 | ನರ್ಸಿಂಗ್ ಆರ್ಡರ್ಲಿ | 18 | | |
| 223 | ವಾರ್ಡ್ ಅಟೆಂಡರ್‌ಗಳು | 193 | | |
| 224 | ಕಾವಲುಗಾರ | 613 | | |
| 225 | ಫೀಲ್ಡ್ ವರ್ಕರ್‌ಗಳು | 316 | | |
| 226 | ಕಾಫ್ ಅಟೆಂಡರ್‌ಗಳು | 24 | | |
| 227 | ಧೋಬಿಗಳು | 1896 | | |
| 228 | ಮಾಲಿಗಳು | 5 | | |
| 229 | ಮಜ್ದೂರ್‌ಗಳು | 418 | | |
| 230 | ವಾಟರ್ ಕ್ಯಾರಿಯರ್‌ಗಳು | 65 | | |
| 231 | ಸ್ವೀಪರ್ಸ್ ಸ್ಕ್ಯಾವೆಂಜರ್‌ಗಳು | 4110 | | |
| 232 | ಬಾರ್ಬರ್‌ಗಳು | 13 | | |
| 233 | ಅನ್‌ಸ್ಕಿಲ್ಡ್ ಲೇಬರ್ ಆರ್ಟಿಸಾನ್ | 6 | | |
| 234 | ಕಾಯರ್ ಅಟೆಂಡರ್‌ಗಳು | 4 | | |
| 235 | ಪ್ಯಾಕರ್‌ಗಳು | 38 | | |

| | | | | |
|---|---|---|---|---|
| 236 | ದರ್ಜಿಗಳು | 23 | | |
| 237 | ಹಿರಿಯಪ್ರಯೋಗಶಾಲ ಸಹಾಯಕರುಗಳು | 46 | | |
| 23೮ | ವಾರ್ಡ್ ಆಯಾಗಳು | 2315 | | |
| 239 | ವರ್ಕ್‌ಮೆನ್ | 36 | | |
| 240 | ಡ್ರೆಸರ್‌ಗಳು | 1107 | | |
| 241 | ವಾರ್ಡ್‌ಬಾಯ್‌ಗಳು | 708 | ಗ್ರೂಪ್–ಡಿ ಹುದ್ದೆಗಳನ್ನು ಆಯಾ ಜಿಲ್ಲೆಗಳಲ್ಲಿ ಭರ್ತಿಮಾಡುವುದರಿಂದ ಕೆಲಸ ಮಾಡುತ್ತಿರುವ ಮತ್ತು ಖಾಲಿ ಹುದ್ದೆಗಳ ವಿವರಗಳು ಪ್ರತಿ ಹುದ್ದೆಗೂ ಪ್ರತ್ಯೇಕವಾಗಿ ಸಿಗುವುದಿಲ್ಲ. | |
| 242 | ತೋಟಿ | 102 | | |
| 243 | ಟಿಂಕರ್‌ಗಳು | 12 | | |
| 244 | ಸ್ಪೆರಿಲೈಸರ್ ಅಪರೇಟರ್‌ಗಳು | 15 | | |
| 245 | 1992 ರಲ್ಲಿ ಮಂಜೂರಾದ ಹುದ್ದೆಗಳು | 2701 | | |
| | ಗ್ರೂಫ್–ಡಿ ದರ್ಜೆಯ ಮೊತ್ತ | 15,432 | 13,160 | 2272 |
| | ಒಟ್ಟು ಮೊತ್ತ | 56,344 | 48,098 | 8,246 |

## ಭಾರತೀಯ ವೈದ್ಯಪದ್ಧತಿಗಳು ಮತ್ತು ಹೋಮಿಯೋಪತಿ ಇಲಾಖೆಯ 1992–93ನೇ ಸಾಲಿನ ವಾರ್ಷಿಕ ವರದಿ

ಭಾರತೀಯ ವೈದ್ಯಪದ್ಧತಿಗಳು ಮತ್ತು ಹೋಮಿಯೋಪತಿ ಇಲಾಖೆಯು ಆಯುರ್ವೇದ, ಯುನಾನಿ, ಸಿದ್ಧ, ಪ್ರಕೃತಿ ಚಿಕಿತ್ಸೆ, ಯೋಗ ಮತ್ತು ಹೋಮಿಯೋಪತಿ ಪದ್ಧತಿಗಳ ಮೂಲಕ ಗ್ರಾಮಾಂತರ ಪ್ರದೇಶಗಳ ಹಾಗೂ ನಗರಗಳ ನಾಗರೀಕರಿಗೆ ಆರೋಗ್ಯ ಸೇವೆಯನ್ನು ಒದಗಿಸಲು ಹಾಗೂ ಈ ಪದ್ಧತಿಗಳಲ್ಲಿ ವೈದ್ಯಕೀಯ ಶಿಕ್ಷಣವನ್ನು ನೀಡಲು ಆಯುರ್ವೇದ ಮತ್ತು ಯುನಾನಿ ಔಷಧಿಗಳ ತಯಾರಿಕೆಯ ಮೇಲೆ ನಿಯಂತ್ರಣ ಹೊಂದಲು ಸ್ಥಾಪಿಸಲ್ಪಟ್ಟಿತು, ಹಾಗೂ ಭಾರತೀಯ ವೈದ್ಯಪದ್ಧತಿಗಳು ಮತ್ತು ಹೋಮಿಯೊಪತಿ ವೈದ್ಯಕೀಯ ವೃತ್ತಿಯನ್ನು ನಡೆಸಲು ಈ ಇಲಾಖೆಯು ಕ್ರಮಬದ್ಧಗೊಳಿಸುತ್ತದೆ.

ಭಾರತೀಯ ವೈದ್ಯಪದ್ಧತಿಗಳು ಮತ್ತು ಹೋಮಿಯೋಪತಿ ಇಲಾಖೆಯ ಮುಖ್ಯಸ್ಥರಾದ ನಿರ್ದೇಶಕರಿಗೆ ಸಹಾಯಕರಾಗಿ ಈ ಕೆಳಕಂಡ ಅಧಿಕಾರಿಗಳು ನಿರ್ದೇಶನಾಲಯದಲ್ಲಿ ಹಾಗೂ ವಿಭಾಗೀಯ ಮಟ್ಟದಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ.

(1) ಉಪನಿರ್ದೇಶಕರು (ಆಯುರ್ವೇದ)

(2) ಉಪನಿರ್ದೇಶಕರು (ಯುನಾನಿ)

(3) ಆಡಳಿತಾಧಿಕಾರಿಗಳು

(4) ಲೆಕ್ಕಾಧಿಕಾರಿಗಳು

(5) ವೈದ್ಯಾಧಿಕಾರಿ ದರ್ಜೆ–1 (ಪ್ರಕೃತಿ ಚಿಕಿತ್ಸೆ ಮತ್ತು ಯೋಗ)

(6) ಉಪನಿರ್ದೇಶಕರು, ಭಾವೈಪ ಮತ್ತು ಹೋ ಗುಲ್ಬರ್ಗಾ ವಿಭಾಗ.

ಈ ಇಲಾಖೆಗೆ ಯೋಜನೆ, ಯೋಜನೇತರ ಹಾಗೂ ಕೇಂದ್ರ ಪುರಸ್ಕೃತ ಯೋಜನೆಗಳಲ್ಲಿ 1991–92 ಮತ್ತು 92-93ನೇ ಆರ್ಥಿಕ ವರ್ಷಗಳಲ್ಲಿ ನೀಡಿದ ಆಯವ್ಯಯವು ಈ ಕೆಳಕಂಡಂತಿದೆ.

| | 1991–92 | | 1992–93 | |
|---|---|---|---|---|
| | ರಾಜ್ಯಮಟ್ಟ | ಜಿಲ್ಲಾ ಮಟ್ಟ | ರಾಜ್ಯ ಮಟ್ಟ | ಜಿಲ್ಲಾ ಮಟ್ಟ |
| (1) ಯೋಜನೇತರ | 563.88 | 339.26 | 650.93 | 473.30 |
| (2) ಯೋಜನೆ | 63.30 | 95.70 | 65.00 | 193.00 |
| (3) ಕೇಂದ್ರ ಪುರಸ್ಕೃತ | — | — | 6.00 | — |
| | 627.18 | 434.96 | 721.93 | 666.30 |

### 1992–93ನೇ ಸಾಲಿನಲ್ಲಿ 31–12–1992ರವರೆಗಿನ ಸಾಧನೆಗಳು :

(1) 25 ಹಾಸಿಗೆಗಳ ಸರ್ಕಾರಿ ಆಯುರ್ವೇದ ಆಸ್ಪತ್ರೆಯನ್ನು ಹಾಸನದಲ್ಲಿ ತೆರೆಯಲು ಸರ್ಕಾರವು ಮಂಜೂರಾತಿಯನ್ನು ಈಗಾಗಲೇ ನೀಡಿದೆ.

## ವೈದ್ಯಕೀಯ ನೆರವು :

ರಾಜ್ಯದಲ್ಲಿ ಒಟ್ಟು 34 ಆಸ್ಪತ್ರೆಗಳು ಹಾಗೂ 436 ಔಷಧಾಲಯಗಳು ಕಾರ್ಯನಿರ್ವಹಿಸುತ್ತಿವೆ. ಪ್ರತಿ ಪದ್ಧತಿಯ ವಿವರಗಳು ಈ ಕೆಳಕಂಡಂತೆ ಇವೆ.—

| ಕ್ರಮ ಸಂಖ್ಯೆ | ಪದ್ಧತಿಗಳು | ಆಸ್ಪತ್ರೆಗಳು | | ಔಷಧಾಲಯಗಳು |
|---|---|---|---|---|
| | | ಆಸ್ಪತ್ರೆಗಳ ಸಂಖ್ಯೆ | ಹಾಸಿಗೆಗಳ ಸಂಖ್ಯೆ | |
| 1) | ಆಯುರ್ವೇದ | 21 | 693 | 381 |
| 2) | ಯುನಾನಿ | 6 | 127 | 36 |
| 3) | ಹೋಮಿಯೋಪತಿ | 2 | 50 | 14 |
| 4) | ಪ್ರಕೃತಿ ಚಿಕಿತ್ಸೆ | 1 | 6 | 5 |
| 5) | ಯೋಗ | 3 | 15 | — |
| 6) | ಸಿದ್ಧ | 1 | 10 | — |
| | ಒಟ್ಟು | 34 | 901 | 436 |

### ಆಯುರ್ವೇದ :

9 ಆಯುರ್ವೇದ ಆಸ್ಪತ್ರೆಗಳು ಜಿಲ್ಲಾ ಮಟ್ಟದಲ್ಲಿ ನಡೆಯುತ್ತಿವೆ. ಅವುಗಳಲ್ಲಿ ಈ ಕೆಳಕಂಡ 3 ಆಸ್ಪತ್ರೆಗಳು ಬೋಧನಾ ಆಸ್ಪತ್ರೆಗಳಾಗಿ ಕಾರ್ಯನಿರ್ವಹಿಸುತ್ತಿವೆ.

| | | ಹಾಸಿಗೆಗಳ ಸಂಖ್ಯೆ |
|---|---|---|
| (1) | ಶ್ರೀ ಜಯಚಾಮರಾಜೇಂದ್ರ ಭಾರತೀಯ ವೈದ್ಯಕೀಯ ಸಂಸ್ಥೆ, ಬೆಂಗಳೂರು. | 225 |
| (2) | ಸರ್ಕಾರಿ ಭಾರತೀಯ ವೈದ್ಯಕೀಯ ಕಾಲೇಜು ಮತ್ತು ಆಸ್ಪತ್ರೆ, ಮೈಸೂರು. | 140 |
| (3) | ಸರ್ಕಾರಿ ತಾರಾನಾಥ ಆಯುರ್ವೇದ ಆಸ್ಪತ್ರೆ, ಬಳ್ಳಾರಿ | 75 |

ಇತರೆ ಜಿಲ್ಲಾ ಮಟ್ಟದಲ್ಲಿರುವ ಹಾಗೂ ಗ್ರಾಮಾಂತರ ಪ್ರದೇಶದಲ್ಲಿರುವ ಆಸ್ಪತ್ರೆಗಳ ಸ್ಥಳ ಹಾಗೂ ಹಾಸಿಗೆಗಳ ಸಂಖ್ಯೆ ಈ ಕೆಳಕಂಡಂತಿದೆ. ಗ್ರಾಮಾಂತರ ಪ್ರದೇಶಗಳ ಆಸ್ಪತ್ರೆಗಳು ಹಾಲಿ ಜಿಲ್ಲಾ ಪರಿಷತ್ತುಗಳ ಕಾರ್ಯವ್ಯಾಪ್ತಿಯಲ್ಲಿವೆ.

| ನಗರ ಪ್ರದೇಶ | | | ಗ್ರಾಮಾಂತರ ಪ್ರದೇಶ | | |
|---|---|---|---|---|---|
| ಬಿಜಾಪುರ | — | 50 | ಹೂಲಿ, ಬೆಳಗಾಂ ಜಿಲ್ಲೆ | — | 10 |
| ಶಿವಮೊಗ್ಗ | — | 40 | ಬೆಳಗುಂಬ, ಹಾಸನ ಜಿಲ್ಲೆ | — | 6 |
| ಹುಬ್ಬಳ್ಳಿ | — | 25 | ಯರದಗೆರೆ, ಚಿಕ್ಕಮಗಳೂರು ಜಿಲ್ಲೆ | — | 6 |
| ಕಾರವಾರ | — | 10 | ಐಮಂಗಲ, ಚಿತ್ರದುರ್ಗ ಜಿಲ್ಲೆ | — | 6 |
| ಮಂಡ್ಯ | — | 25 | ಮಂಚಲದೊರೆ, ತುಮಕೂರು ಜಿಲ್ಲೆ | — | 5 |
| ಹಾಸನ | — | 25 | ಚಳ್ಳಕೆರೆ, ಚಿತ್ರದುರ್ಗ ಜಿಲ್ಲೆ | — | 6 |
| | | | ಚಿತ್ತಾಪುರ, ಗುಲ್ಬರ್ಗಾ ಜಿಲ್ಲೆ | — | 10 |
| | | | ಕಮಲಾಪುರ ,, | — | 6 |
| | | | ಹೊಳೆನರಸೀಪುರ, ಹಾಸನ ಜಿಲ್ಲೆ | — | 10 |
| | | | ಹದಿನಾರು, ಮೈಸೂರು ಜಿಲ್ಲೆ | — | 6 |
| | | | ಗಿಣಿಗೆರಾ, ರಾಯಚೂರು ಜಿಲ್ಲೆ | — | 6 |
| | | | ಸಂಡೂರು ಬಳ್ಳಾರಿ ಜಿಲ್ಲೆ | — | 6 |

ರಾಜ್ಯದಲ್ಲಿ ಒಟ್ಟು 381 ಸರ್ಕಾರಿ ಆಯುರ್ವೇದ ಔಷಧಾಲಯಗಳು ಕಾರ್ಯ ನಿರ್ವಹಿಸುತ್ತಿವೆ.

ಯುನಾನಿ :

ರಾಜ್ಯದಲ್ಲಿ ಒಟ್ಟು 6 ಯುನಾನಿ ಆಸ್ಪತ್ರೆಗಳು ಹಾಗೂ 36 ಯುನಾನಿ ಔಷಧಾಲಯಗಳು ಇವೆ. ಬೆಂಗಳೂರಿನ ಶ್ರೀ ಜಯಚಾಮರಾಜೇಂದ್ರ ಭಾರತೀಯ ವೈದ್ಯಕೀಯ ಸಂಸ್ಥೆಯಲ್ಲಿ 75 ಹಾಸಿಗೆಗಳಿದ್ದು ಇದು ಬೆಂಗಳೂರಿನ ಸರ್ಕಾರಿ ಯುನಾನಿ ವೈದ್ಯಕೀಯ ಕಾಲೇಜಿನ ಬೋಧಕ ಆಸ್ಪತ್ರೆಯಾಗಿ ಕೆಲಸ ನಿರ್ವಹಿಸುತ್ತಿದೆ. ಮೈಸೂರಿನ ಸರ್ಕಾರಿ ಭಾರತೀಯ ವೈದ್ಯಕೀಯ ಆಸ್ಪತ್ರೆಯಲ್ಲಿ 20 ಹಾಸಿಗೆಗಳು ಮತ್ತು ರಾಯಚೂರು ಹಾಗೂ ರಾಮನಗರಗಳಲ್ಲಿ ಕ್ರಮವಾಗಿ 10. ತಿಮ್ಮಾಪುರ ರಂಗಂಪೇಟೆ ಗುಲ್ಬರ್ಗಾ, ಜಿಲ್ಲೆ ಹಾಗೂ ರಾಜಲ್‌ಭಂಡ, ರಾಯಚೂರು ಜಿಲ್ಲೆ, ಇಲ್ಲಿ ಕ್ರಮವಾಗಿ 6 ಹಾಸಿಗೆಗಳ ಆಸ್ಪತ್ರೆಗಳಿದ್ದು ಒಳರೋಗಿಗಳಿಗೆ ಚಿಕಿತ್ಸಾ ಸೌಲಭ್ಯವನ್ನು ಕಲ್ಪಿಸಲಾಗಿದೆ. ಕೇಂದ್ರ ಸರ್ಕಾರದಿಂದ ಬೆಂಗಳೂರಿನ ಬಿಸ್‌ಜೆಐಎಂನಲ್ಲಿ ಯುನಾನಿ ಸಂಶೋಧನಾ ಕೇಂದ್ರವೊಂದು ಪ್ರಾರಂಭವಾಗಿರುತ್ತದೆ.

ಹೋಮಿಯೋಪತಿ :

ಬೆಂಗಳೂರಿನಲ್ಲಿ 40 ಹಾಸಿಗೆಗಳ ಒಂದು ಸರ್ಕಾರಿ ಹೋಮಿಯೋಪತಿ ಆಸ್ಪತ್ರೆ ಇದೆ. ಅಲ್ಲದೆ ಕೊಡಗು ಜಿಲ್ಲೆಯ ಸೋಮವಾರಪೇಟೆಯಲ್ಲಿ 10 ಹಾಸಿಗೆಗಳ ಒಂದು ಆಸ್ಪತ್ರೆಯು ಕಾರ್ಯನಿರ್ವಹಿಸುತ್ತಿದೆ. 14 ಹೋಮಿಯೋಪತಿ ಔಷಧಾಲಯಗಳು ಜಿಲ್ಲಾ ಪರಿಷತ್ತಿನ ಅಧೀನದಲ್ಲಿ ಗ್ರಾಮಾಂತರ ಪ್ರದೇಶಗಳಲ್ಲಿವೆ.

ಪ್ರಕೃತಿ ಚಿಕಿತ್ಸೆ :

ಮೈಸೂರಿನಲ್ಲಿ 6 ಹಾಸಿಗೆಗಳ ಒಂದು ಪ್ರಕೃತಿ ಚಿಕಿತ್ಸೆ ಆಸ್ಪತ್ರೆಯು ಕಾರ್ಯನಿರ್ವಹಿಸುತ್ತಿದೆ. ಅಲ್ಲದೆ 5 ಪ್ರಕೃತಿ ಚಿಕಿತ್ಸಾಲಯಗಳು ರಾಜ್ಯದಲ್ಲಿದ್ದು ಹಾಲಿ ಅವುಗಳು ಜಿಲ್ಲಾ ಪರಿಷತ್ತಿನ ಅಧೀನದಲ್ಲಿವೆ.

ಸಿದ್ಧ :

ಸಿದ್ಧ ಪದ್ಧತಿಯ 10 ಹಾಸಿಗೆಗಳ ಸೌಲಭ್ಯವನ್ನು ಬೆಂಗಳೂರಿನ ಶ್ರೀ ಜಯಚಾಮರಾಜೇಂದ್ರ ಭಾರತೀಯ ವೈದ್ಯಕೀಯ ಸಂಸ್ಥೆಯಲ್ಲಿ ಕಲ್ಪಿಸಲಾಗಿದೆ.

ಯೋಗ :

ಯೋಗ ಪದ್ಧತಿಯಲ್ಲಿ ಒಳರೋಗಿಗಳಿಗೆ ಚಿಕಿತ್ಸೆ ನೀಡಲು ಅನುಕೂಲವಾಗುವಂತೆ, ಬೆಂಗಳೂರು ಮೈಸೂರು ಹಾಗೂ ಬಳ್ಳಾರಿ ಆಸ್ಪತ್ರೆಗಳಲ್ಲಿ ಐದು ಹಾಸಿಗೆಗಳ ಸೌಲಭ್ಯವನ್ನು ಕಲ್ಪಿಸಲಾಗಿದೆ. ಬೆಂಗಳೂರಿನ ಶ್ರೀ ಜಯಚಾಮರಾಜೇಂದ್ರ ಭಾರತೀಯ ವೈದ್ಯಕೀಯ ಸಂಸ್ಥೆ ಮತ್ತು ಮೈಸೂರಿನಲ್ಲಿರುವ ಸರ್ಕಾರಿ ಭಾರತೀಯ ವೈದ್ಯಕೀಯ ಕಾಲೇಜು ಮತ್ತು ಆಸ್ಪತ್ರೆ ಮತ್ತು ತಾರಾನಾಥ ಕಾಲೇಜ್ ಆಸ್ಪತ್ರೆ, ಬಳ್ಳಾರಿಯಲ್ಲಿ ನಿಯತಕಾಲಿಕವಾಗಿ ಯೋಗಾ ಶಿಬಿರಗಳನ್ನು ಅತಿ ಬೊಜ್ಜು ರೋಗಿಗಳಿಗೆ ನಡೆಸಲಾಗುತ್ತಿದೆ

ಸಂಶೋಧನೆ :

ಸಂಶೋಧನಾ ವಿಭಾಗದಿಂದ ಮಧುಮೇಹ ಖಾಯಿಲೆಗೆ ಸಂಶೋಧನೆಯನ್ನು ಶ್ರೀ ಜಯಚಾಮರಾಜೇಂದ್ರ ಭಾರತೀಯ ವೈದ್ಯಕೀಯ ಸಂಸ್ಥೆ, ಬೆಂಗಳೂರು, ಇಲ್ಲಿ ನಡೆಸಲಾಗುತ್ತಿದೆ.

## ವೈದ್ಯಕೀಯ ಶಿಕ್ಷಣ

1 ಆಯುರ್ವೇದ :—(ಬಿಎಎಂಎಸ್ ತರಗತಿ)

ರಾಜ್ಯದಲ್ಲಿ 3 ಸರ್ಕಾರಿ ಆಯುರ್ವೇದ ಕಾಲೇಜುಗಳಿದ್ದು, ಮತ್ತು 19 ಕಾಲೇಜುಗಳು ಖಾಸಗಿ ಕಾಲೇಜುಗಳಿವೆ. ಅವುಗಳಲ್ಲಿ 5 ಕಾಲೇಜುಗಳು ಸರ್ಕಾರದ ಧನ ಸಹಾಯದ ಕಾಲೇಜುಗಳ ಈ ಕಾಲೇಜುಗಳ ಹೆಸರು ಮತ್ತು ಅವುಗಳ ಪ್ರವೇಶಾವಕಾಶ ಈ ಕೆಳಕಂಡಂತಿರುತ್ತದೆ.

| | | |
|---|---|---|
| 1. ಸರ್ಕಾರಿ ಭಾರತೀಯ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು | ... | 60 |
| 2. ಸರ್ಕಾರಿ ಭಾರತೀಯ ವೈದ್ಯಕೀಯ ಮಹಾವಿದ್ಯಾಲಯ, ಮೈಸೂರು | ... | 50 |
| 3. ತಾರಾನಾಥ ಆಯುರ್ವೇದ ಮಹಾವಿದ್ಯಾಲಯ, ಬಳ್ಳಾರಿ | ... | 25 |
| 4. ಧರ್ಮಸ್ಥಳ ಮಂಜುನಾಥೇಶ್ವರ ಆಯುರ್ವೇದ ವಿದ್ಯಾಲಯ, ಉಡುಪಿ | | 50 |
| 5. ಆಯುರ್ವೇದ ಮಹಾವಿದ್ಯಾಲಯ, ಹುಬ್ಬಳ್ಳಿ | ... | 40 |
| 6. ಡಿ. ಜಿ. ಎಂ. ಮೇಲ್ಮಳಗಿ ಆಯುರ್ವೇದ ಮಹಾ ವಿದ್ಯಾಲಯ, ಗದಗ | ... | 50 |
| 7. ಆಯುರ್ವೇದ ಮಹಾವಿದ್ಯಾಲಯ, ಬಿಜಾಪುರ | ... | 50 |
| 8. ಬಿ. ಎಂ. ಕೆ. ಆಯುರ್ವೇದ ವೈದ್ಯಕೀಯ ಮಹಾ ವಿದ್ಯಾಲಯ, ಬೆಳಗಾಂ | ... | 50 |
| 9. ಎ. ಎಲ್. ಎನ್. ರಾವ್. ಆಯುರ್ವೇದ ಕಾಲೇಜು. ಕೊಪ್ಪ, ಚಿಕ್ಕಮಗಳೂರು ಜಿಲ್ಲೆ | ... | 30 |
| 10. ಚೆಂಬರ್ ಶಿಕ್ಷಣ ಸಂಸ್ಥೆ ಆಯುರ್ವೇದ ಕಾಲೇಜು, ಬೀದರ್ | ... | 20 |
| 11. ಶ್ರೀ ತೆಗ್ಗಿನಮಠದ ಕಲಾ ಮತ್ತು ವಿದ್ಯಾ ಸಂಸ್ಥೆ ಆಯುರ್ವೇದ ವೈದ್ಯಕೀಯ ಕಾಲೇಜು, ಹೊಸಪೇಟೆ. | ... | 30 |
| 12. ಶ್ರೀ ಸಿದ್ದೇಶ್ವರ ವಿದ್ಯಾಧಾನ ಸಮಿತಿ ಆಯುರ್ವೇದ ವೈದ್ಯಕೀಯ ಕಾಲೇಜು, ಮುಂಡರ್ಗಿ, ದಾರವಾಡ ಜಿಲ್ಲೆ | ... | 25 |
| 13. ಶ್ರೀ ವಿಜಯ ಮಹಾಂತೇಶ್ ವಿದ್ಯಾವರ್ಧಕ ಸಂಸ್ಥೆ ಆಯುರ್ವೇದಿಕ ವೈದ್ಯಕೀಯ ಕಾಲೇಜು, ಇಲಕಲ್, ಬಿಜಾಪುರ ಜಿಲ್ಲಾ | ... | 25 |
| 14. ಅಶ್ವಿನಿ ವಿದ್ಯಾ ಸಂಸ್ಥೆಯ ಆಯುರ್ವೇದಿಕ ಮೆಡಿಕಲ್ ಕಾಲೇಜು. ದಾವಣಗೆರೆ, ಚಿತ್ರದುರ್ಗ ಜಿಲ್ಲೆ | ... | 40 |
| 15. ಶ್ರೀ ತೆಗ್ಗಿನ ಮಠದ ಕಲಾ ಮತ್ತು ವಿದ್ಯಾ ಸಂಸ್ಥೆಯ ಆಯುರ್ವೇದ ವೈದ್ಯಕೀಯ ಕಾಲೇಜು ಭದ್ರಾವತಿ | ... | 50 |
| 16. ಶ್ರೀಧರ್ಮಸ್ಥಳ ಮಂಜುನಾಥೇಶ್ವರ ಆಯುರ್ವೇದ ವೈದ್ಯಕೀಯ ಕಾಲೇಜು, ಹಾಸನ. | ... | 50 |
| 17. ಜಗದ್ಗುರು ತೋಂಟಾಡಾರ್ಯ ವಿದ್ಯಾಪೀಠ, ಗದಗ ಎಸ್.ಎಸ್. ಆಯುರ್ವೇದ ವೈದ್ಯಕೀಯ ಕಾಲೇಜು ಹಾವೇರಿ | ... | 25 |
| 18. ರಿಯನ್ಸ್ ಸ್ವಾಮಿ ವಿವೇಕಾನಂದ ವಿದ್ಯಾ ಸಂಸ್ಥೆ ಆಯುರ್ವೇದ ವೈದ್ಯಕೀಯ ಕಾಲೇಜು ಗಜೇಂದ್ರಗಡ | ... | 25 |
| 19. ಬಿ. ಎಸ್. ಎನ್. ರೂರಲ್ ಆಯುರ್ವೇದ ಕಾಲೇಜು, ಬಿಜಾಪುರ | ... | 25 |

20. ಶ್ರೀ ಕಾಳಿದಾಸ ವಿದ್ಯಾ ಸಂಸ್ಥೆ, ಆಯುರ್ವೇದ ಕಾಲೇಜು, ಬಾದಾಮಿ

21. ರಾಜೀವ್ ಗಾಂಧಿ ವಿದ್ಯಾಸಂಸ್ಥೆ, ಆಯುರ್ವೇದ ಕಾಲೇಜು, ರೋಣ ದಾರವಾಡ ಜಿಲ್ಲೆ ... 25

22. ಶ್ರೀ ಮಹಾಗಣಪತಿ ವಿದ್ಯಾಸಂಸ್ಥೆ. ಆಯುರ್ವೇದ ವೈದ್ಯಕೀಯ ಕಾಲೇಜು ದಾರವಾಡ ... 40

ಆಯುರ್ವೇದವಲ್ಲಿ ಸ್ನಾತಕೋತ್ತರ ಪದವಿಗಳನ್ನು ಈ ಕೆಳಕಂಡ ವಿಷಯಗಳಲ್ಲಿ ನಡೆಸಲಾಗುತ್ತಿದೆ.

1. ಸರ್ಕಾರಿ ಭಾರತೀಯ ವೈದ್ಯಕೀಯ ಮಹಾವಿದ್ಯಾಲಯ, ಮೈಸೂರು ... ಕಾಯಚಿಕಿತ್ಸಾ
2. ಸರ್ಕಾರಿ ಭಾರತೀಯ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು ... 1. ದ್ರವ್ಯಗುಣ
   2. ಶಲ್ಯತಂತ್ರ

ಪ್ರತಿ ವಿಭಾಗದಲ್ಲಿ 7 ಅಭ್ಯರ್ಥಿಗಳಿಗೆ ಪ್ರವೇಶಾವಕಾಶ ಇರುತ್ತದೆ.

ಯುನಾನಿ ;

ಯುನಾನಿ ವೈದ್ಯ ಪದ್ಧತಿಯಲ್ಲಿ ವೈದ್ಯಕೀಯ ಶಿಕ್ಷಣ ನೀಡಲು 197 ನೇ ಸಾಲಿನಿಂದ ಬೆಂಗಳೂರಿನಲ್ಲಿ ಸರ್ಕಾರಿ ಯುನಾನಿ ವೈದ್ಯಕೀಯ ಕಾಲೇಜು ಕಾರ್ಯನಿರ್ವಹಿಸುತ್ತಿದೆ. ಈ ಕಾಲೇಜು ಬೆಂಗಳೂರು ವಿಶ್ವವಿದ್ಯಾನಿಲಯಕ್ಕೆ ಸಂಯೋಜನೆ ಹೊಂದಿದ್ದು ಪ್ರವೇಶಾವಕಾಶ 50 ಇರುತ್ತದೆ.

ಹೋಮಿಯೋಪತಿ ;

ರಾಜ್ಯದಲ್ಲಿ 12 ಹೋಮಿಯೋಪತಿ ಕಾಲೇಜುಗಳಿವೆ. ಅವುಗಳಲ್ಲಿ ಬೆಂಗಳೂರಿನಲ್ಲಿ ಒಂದು ಕಾಲೇಜು ಸರ್ಕಾರಿ ಕಾಲೇಜು ಆಗಿದೆ. ಉಳಿದ 11 ಖಾಸಗಿ ಕಾಲೇಜುಗಳಾಗಿರುತ್ತದೆ. ಈ ಹೋಮಿಯೋಪತಿ ಮಹಾ ವಿದ್ಯಾಲಯಗಳ ವಿದ್ಯಾರ್ಥಿಗಳ ಸೇರ್ಪಡೆ ಈ ಕೆಳಕಂಡಂತೆ ಇರುತ್ತದೆ.

(1) ಸರ್ಕಾರಿ ಹೋಮಿಯೋಪತಿ ಮಹಾ ವಿದ್ಯಾಲಯ, ಬೆಂಗಳೂರು — 30
(2) ಎ.ಎಂ. ಶೇಖ್ ಹೋಮಿಯೋಪತಿ ಕಾಲೇಜು ಬೆಳಗಾಂ — 100
(3) ಭರತೇಶ್ ಹೋಮಿಯೋಪತಿ ಕಾಲೇಜು ಬೆಳಗಾಂ — 40
(4) ಮರಾಠ ಮಂಡಲ್ ಹೋಮಿಯೋಪತಿ ಕಾಲೇಜು, ಬೆಳಗಾಂ — 40
(5) ಕರ್ನಾಟಕ ಹೋಮಿಯೋಪತಿ ವೈದ್ಯಕೀಯ ಕಾಲೇಜು, ಹುಬ್ಬಳ್ಳಿ — 25
(6) ಮೌಲಾನಾ ಅಜಾದ್ ಹೋಮಿಯೋಪತಿ ಕಾಲೇಜು, ಹುಬ್ಬಳ್ಳಿ — 40
(7) ಹೆಚ್.ಕೆ.ಇ. ಹೋಮಿಯೋಪತಿ ಕಾಲೇಜು ಗುಲ್ಬರ್ಗ — 50
(8) ಫಾದರ್‌ಮುಲ್ಲರ್ ಹೋಮಿಯೋಪತಿ ಕಾಲೇಜು, ಮಂಗಳೂರು — 50
(9) ಎಲ್.ಇ.ಇ. ಹೋಮಿಯೋಪತಿ ಕಾಲೇಜು, ಧಾರವಾಡ — 25
(10) ಅಪ್ಪ ಶ್ರೀ ನಿಜಲಿಂಗೇಶ್ವರ ವಿದ್ಯಾಸಂಸ್ಥೆ, ಸಂಕೇಶ್ವರ, ಬೆಳಗಾಂ ಜಿಲ್ಲೆ — 25
(11) ಆಲ್ ಅಮೀನ್ ಹೋಮಿಯೋಪತಿ ಕಾಲೇಜು, ಬಿಜಾಪುರ — 25
(12) ನ್ಯಾಶನಲ್ ಹೋಮಿಯೋಪತಿ ಮೆಡಿಕಲ್ ಕಾಲೇಜು, ಧಾರವಾಡ — 25

ಪ್ರಕೃತಿ ಚಿಕಿತ್ಸೆ :

ಮೈಸೂರಿನಲ್ಲಿ ಪ್ರಕೃತಿ ಚಿಕಿತ್ಸೆ ಮತ್ತು ಯೋಗ ಕಾಲೇಜು ನಡೆಯುತ್ತಿದೆ. ಅಲ್ಲಿ ಆಯುರ್ವೇದ ಪದವೀಧರರಿಗೆ 2 ವರ್ಷದ ಡಿಪ್ಲೋಮೋ ಶಿಕ್ಷಣವನ್ನು ನೀಡಲಾಗುತ್ತಿದೆ. ಇದರ ಪ್ರವೇಶ ಸಂಖ್ಯೆ 12 ಶ್ರೀ ಧರ್ಮಸ್ಥಳದಲ್ಲಿ ಮಂಜುನಾಥೇಶ್ವರ ಪ್ರಕೃತಿ ಚಿಕಿತ್ಸೆ ಖಾಸಗಿ ಮಹಾ ವಿದ್ಯಾಲಯವು ಉಜಿರೆಯಲ್ಲಿದ್ದು ಅದರ ಪ್ರವೇಶ ಸಂಖ್ಯೆ 30 ಆಗಿರುತ್ತದೆ.

### ಔಷಧ ನಿಯಂತ್ರಣ :

ಇಲಾಖೆಯು ಔಷಧಿಗಳ ತಯಾರಿಕೆ, ಮಾರಾಟ ಮುಂತಾದ ವಿಷಯಗಳಲ್ಲಿ 1976ನೇ ಡಿಸೆಂಬರ್‌ನಿಂದ ಡ್ರಗ್ಸ್ ಮತ್ತು ಕಾಸ್ಮೆಟಿಕ್ಸ್ ಅಧಿನಿಯಮ 1940 ಮತ್ತು ಅದರ ನಿಯಮಾವಳಿಗಳಡಿಯಲ್ಲಿ ನಿಯಂತ್ರಣವನ್ನು ಹೊಂದಿರುತ್ತದೆ.

ಆಯುರ್ವೇದ, ಯುನಾನಿ, ಸಿದ್ಧ ಹಾಗೂ ಹೋಮಿಯೋಪತಿಯಲ್ಲಿ ಇರುವ ಲೈಸನ್ಸ್‌ದಾರರ ವಿವರಗಳು ಈ ಕೆಳಕಂಡಂತೆ ಇವೆ.

| ಪದ್ಧತಿಗಳು | | 1-4-92ರಿಂದ 31-12-92ರವರೆಗೆ ಲೈಸನ್ಸ್ ನೀಡಿದ ಸಂಖ್ಯೆ | ಒಟ್ಟು 31-12-92ರ ವರೆಗೆ ಲೈಸನ್ಸ್‌ದಾರರ ಸಂಖ್ಯೆ |
|---|---|---|---|
| ಆಯುರ್ವೇದ | | 14 | 237 |
| | ಯುನಾನಿ | — | 09 |
| | ಸಿದ್ಧ | — | 01 |
| ಲೋನ್ ಲೈಸನ್ಸ್ | | — | — |
| | ಆಯುರ್ವೇದ | — | — |
| | ಯುನಾನಿ | — | 43 |
| ಹೋಮಿಯೋಪತಿ ; | | | |
| ಎ. ತಯಾರಿಕೆ | | — | 11 |
| ಬಿ. ಸಗಟು ಮಾರಾಟ | | 6 | 67 |
| ಸಿ. ಚಿಲ್ಲರೆ ಮಾರಾಟ | | 6 | 113 |
| | ಒಟ್ಟು | 26 | 481 |

### ಸರ್ಕಾರಿ ಕೇಂದ್ರಿಯ ಔಷಧಾಗಾರ, ಬೆಂಗಳೂರು

ಬೆಂಗಳೂರಿನ ಸರ್ಕಾರಿ ಕೇಂದ್ರಿಯ ಔಷಧಾಗಾರದಲ್ಲಿ ಆಯುರ್ವೇದ ಮತ್ತು ಯುನಾನಿ ಔಷಧಿಗಳನ್ನು ತಯಾರಿಸಿ ಅವುಗಳನ್ನು ರಾಜ್ಯದಲ್ಲಿರುವ ಎಲ್ಲಾ ಆಸ್ಪತ್ರೆಗಳು ಔಷಧಾಲಯಗಳು ಹಾಗೂ ಎಸ್.ಎಂ.ಪಿ. ಕೇಂದ್ರಗಳಿಗೆ ಬೇಡಿಕೆಗನುಗುಣವಾಗಿ ಸರಬರಾಜು ಮಾಡಲಾಗುತ್ತಿದೆ. ಈ ಇಲಾಖೆಯು ಔಷಧಾಲಯಗಳಿಗೆ ವಾರ್ಷಿಕ ರೂ. 12,000-00 ಮೌಲ್ಯದ ಔಷಧಿಗಳನ್ನು ಸರಬರಾಜು ಮಾಡಬೇಕಾಗಿದ್ದು ಅದರಲ್ಲಿ ಇಲ್ಲಿಂದ ಪ್ರತಿ ವರ್ಷವೂ ಪ್ರತಿ ಯುನಾನಿ ಆಯುರ್ವೇದ ಔಷಧಾಲಯಗಳಿಗೆ ರೂ. 7,200-00 ಬೆಲೆಯ ಔಷಧಿಗಳನ್ನು ಸರಬರಾಜು ಮಾಡಲಾಗುತ್ತಿದೆ. ಉಳಿದ ರೂ. 4,800-00ರ ಬೆಲೆಯ ಔಷಧಿಗಳನ್ನು ನಿಗದಿತ ಬೆಲೆಯಲ್ಲಿ ಅಂಗೀಕೃತ ಸಂಸ್ಥೆಗಳಿಂದ ಪಡೆಯಲಾಗುತ್ತಿದೆ.

### ಔಷಧ ಪರೀಕ್ಷೆ ಪ್ರಯೋಗಾಲಯ :

ಔಷಧಿಗಳ ಗುಣ ಮಟ್ಟವನ್ನು ಪರೀಕ್ಷಿಸಲು ಔಷಧ ಪರೀಕ್ಷಾ ಪ್ರಯೋಗಾಲಯದ ಒಂದು ಘಟಕವನ್ನು ತೆರೆಯಲಾಗಿದೆ. ಇದು ಸರ್ಕಾರಿ ಕೇಂದ್ರಿಯ ಔಷಧಾಗಾರ, ಬೆಂಗಳೂರು ಇಲ್ಲಿ ಕಾರ್ಯ ನಿರ್ವಹಿಸುತ್ತಿದೆ.

### ಗಿಡ ಮೂಲಿಕೆಗಳ ತೋಟ :

ಬೆಂಗಳೂರು, ಮೈಸೂರು ಹಾಗೂ ಬಳ್ಳಾರಿಯ ಆಯುರ್ವೇದ ಕಾಲೇಜಿಗೆ ಹೊಂದಿಕೊಂಡಂತೆ ಸಣ್ಣ ಗಿಡಮೂಲಿಕೆಗಳ ತೋಟಗಳನ್ನು ನಿರ್ವಹಿಸಲಾಗುತ್ತಿದೆ. ಇದರಿಂದ ವಿದ್ಯಾರ್ಥಿಗಳ ಪಠ್ಯಕ್ರಮಕ್ಕೆ ಸಂಬಂಧಿಸಿದ ಪ್ರಯೋಗಾರ್ಥ ಬೋಧನೆಗೆ ಗಿಡಮೂಲಿಕೆಗಳು ಪ್ರಾತ್ಯಕ್ಷಿಕೆಯಾಗಿರುವುದು. ಅಲ್ಲದೆ ನಿತ್ಯ ಆಸ್ಪತ್ರೆಗೆ ಬೇಕಾಗುವ ಕೆಲವು ಔಷಧಿಗಳನ್ನು ತಯಾರಿಸಲು ಅನುಕೂಲವಾಗುವುದು. ಬೆಂಗಳೂರಿನ ವಿಶ್ವವಿದ್ಯಾನಿಲಯದ ಹತ್ತಿರದ ಧನ್ವಂತರಿವನದಲ್ಲಿ ಅರಣ್ಯ ಇಲಾಖೆಯ ಸಹಾಯದೊಂದಿಗೆ ಗಿಡಮೂಲಿಕೆಗಳನ್ನು ಬೆಳೆಸಲಾಗುತ್ತಿದೆ. ಇದುವರೆವಿಗೆ ರೂ. 9.00 ಲಕ್ಷ ಹಣವನ್ನು

ಧನ್ವಂತರಿ ವನದ ಅಭಿವೃದ್ಧಿಗಾಗಿ ಬಿಡುಗಡೆ ಮಾಡಲಾಗಿದೆ. ಈಗ 500ಕ್ಕೂ ಹೆಚ್ಚು ಗಿಡಮೂಲಿಕೆಗಳನ್ನು ಅಲ್ಲಿ ನೆಡೆಸಲಾಗಿದೆ.

## ವೈದ್ಯಕೀಯ ವೃತ್ತಿ

ವೈದ್ಯಕೀಯ ವೃತ್ತಿಯನ್ನು ನಿಯಂತ್ರಿಸಲು ಈ ಕೆಳಕಂಡ ಎರಡು ಮಂಡಳಿಗಳಿವೆ.

### ಕರ್ನಾಟಕ ಆಯುರ್ವೇದ ಮತ್ತು ಯುನಾನಿ ವೈದ್ಯ ವೃತ್ತಿದಾರರ ಮಂಡಳಿ : ಬೆಂಗಳೂರು.

ಈ ಮಂಡಳಿಯು ಆಯುರ್ವೇದ, ಯುನಾನಿ ಹಾಗೂ ಇಂಟಿಗ್ರೇಟೆಡ್ ವೈದ್ಯ ಪದ್ಧತಿಗಳ ವೈದ್ಯಕೀಯ ವೃತ್ತಿಯನ್ನು ನಿಯಂತ್ರಿಸುತ್ತದೆ. ಮೇಲಿನ ಪದ್ಧತಿಗಳಲ್ಲಿ ನೊಂದಾಯಿಸಲ್ಪಟ್ಟ ವೈದ್ಯ ವೃತ್ತಿದಾರರ ಮಾಹಿತಿ ಈ ಕೆಳಕಂಡಂತಿದೆ.

| ಪದ್ಧತಿ | 1-4-92 ರಿಂದ 31-12-92 ರವರೆಗೆ | ಒಟ್ಟು ದಿನಾಂಕ 31-12-92ರ ವರೆಗಿನ ಮಾಹಿತಿ |
|---|---|---|
| 1) ಆಯುರ್ವೇದ | 172 | 10332 |
| 2) ಯುನಾನಿ | 6 | 656 |
| 3) ಇಂಟಿಗ್ರೇಟೆಡ್ | 14 | 2011 |
| | 192 | 12999 |

### (2) ಕರ್ನಾಟಕ ಹೋಮಿಯೋಪತಿ ವೈದ್ಯ ಪದ್ಧತಿಯ ಮಂಡಳಿ : ಬೆಂಗಳೂರು :

ಈ ಮಂಡಳಿಯು ಹೋಮಿಯೋಪತಿ ವೃತ್ತಿಯನ್ನು ಹಾಗೂ ವೈದ್ಯ ಶಿಕ್ಷಣವನ್ನು ನಿಯಂತ್ರಿಸುತ್ತದೆ. ದಿನಾಂಕ 31-12-92ರ ವರೆಗೆ ಅಂದರೆ ಇದುವರೆವಿಗೂ ಒಟ್ಟು 4453 ವೈದ್ಯ ವೃತ್ತಿದಾರರು ನೊಂದಾಯಿಸ್ಪಟ್ಟಿರುತ್ತಾರೆ.

## ಔಷಧಿ ನಿಯಂತ್ರಣ ಇಲಾಖೆಯ 1992-93ನೇ ಸಾಲಿನ (31ನೇ ಡಿಸೆಂಬರ್ 1992ರವರೆಗೆ) ವಾರ್ಷಿಕ ವರದಿ.

ರಾಜ್ಯದಲ್ಲಿ ತಯಾರಾಗುವ ಹಾಗೂ ಮಾರಾಟಕ್ಕಾಗಿ ಸರಬರಾಜು ಮಾಡಲಾಗುತ್ತಿರುವ ಔಷಧಗಳ ಮೇಲೆ ಕಟ್ಟುನಿಟ್ಟಾದ ನಿಯಂತ್ರಣ ಕ್ರಮಗಳನ್ನು ಕೈಗೊಳ್ಳುವುದರ ಹಾಗೂ ಎಚ್ಚರಿಕೆ ವಹಿಸುವುದರ ಮೂಲಕ ಗ್ರಾಹಕರ ಆರೋಗ್ಯವನ್ನು ಕಾಪಾಡುವುದು ಹಾಗೂ ಆರೋಗ್ಯ ರಕ್ಷಣೆಯ ಜವಾಬ್ದಾರಿ ಹೊರುವುದು ಮತ್ತು ಆ ಮೂಲಕ ಉತ್ತಮ ಗುಣಮಟ್ಟದ ಔಷಧಗಳು ನಿಯಂತ್ರಿತ ಬೆಲೆಗಳಲ್ಲಿ ದೊರಕುವಂತೆ ಮಾಡುವುದು ಔಷಧ ನಿಯಂತ್ರಣ ಇಲಾಖೆಯ ಮುಖ್ಯ ಕರ್ತವ್ಯವಾಗಿದೆ.

ಕರ್ನಾಟಕ ರಾಜ್ಯದ ಔಷಧ ನಿಯಂತ್ರಣ ಇಲಾಖೆಯು ಈ ಕೆಳಕಂಡ ಶಾಸನಗಳನ್ನು ಜಾರಿಗೊಳಿಸುವುದರಲ್ಲಿ ಮಾಡಬೇಕಾದ ಶಾಸನಬದ್ಧ ಪ್ರಕಾರ್ಯಗಳನ್ನು ನಿರ್ವಹಿಸುತ್ತದೆ.

1. ಔಷಧ ಮತ್ತು ಕಾಂತಿವರ್ಧಕಗಳ ಅಧಿನಿಯಮ 1940 ಮತ್ತು ಅದರ ಮೇರೆಗಿನ ನಿಯಮಗಳ ಜಾರಿ.
2. ಔಷಧಗಳ (ಬೆಲೆ ನಿಯಂತ್ರಣ) ಆದೇಶ 1987.
3. ಔಷಧ ಮತ್ತು ಮಂತ್ರೋಪಾಯ (ಆಕ್ಷೇಪಣೀಯ ಜಾಹಿರಾತು) ಅಧಿನಿಯಮ 1954 ಮತ್ತು ಅದರ ಮೇರೆಗಿನ ನಿಯಮಗಳು.
4. ಫಾರ್ಮಸಿ ಅಧಿನಿಯಮ 1948 ಮತ್ತು ವಿದ್ಯಾನಿಯಮಾವಳಿ.
5. ವಿಷವಸ್ತುಗಳ ಅಧಿನಿಯಮ 1919 ಮತ್ತು ಕರ್ನಾಟಕ ವಿಷ ವಸ್ತುಗಳ ಅಧಿನಿಯಮ 1966.
6. ಔಷಧಿ ಮತ್ತು ಕಾಂತಿವರ್ಧಕ ಅಧಿನಿಯಮ ಮತ್ತು ಅದರ ಮೇರೆಗಿನ ನಿಯಮದಡಿಯಲ್ಲಿ ಬರುವ ಔಷಧಗಳಿಗೆ ಸಂಬಂಧಪಟ್ಟಂತೆ ಮಾದಕ ಔಷಧಗಳ ಹಾಗೂ ಮಾನಸಿಕ ಭ್ರಮೆಯನ್ನುಂಟು ಮಾಡುವ ವಸ್ತುಗಳ ಅಧಿನಿಯಮ 1985.

ಮೇಲ್ಕಂಡ ಅಧಿನಿಯಮಗಳ ಪ್ರಕಾರ ಔಷಧ ನಿಯಂತ್ರಣ ಇಲಾಖೆಯು ಕೆಳಕಂಡ ಪ್ರಕಾರ್ಯಗಳನ್ನು ನಿರ್ವಹಿಸುತ್ತದೆ.

1. ಪರವಾನಗಿ ನೀಡುವ ಸುವ್ಯವಸ್ಥೆಯ ಮೂಲಕ ಔಷಧ ತಯಾರಿಸುವ ಮತ್ತು ಮಾರಾಟ ಮಾಡುವ ಆವರಣಗಳಿಗೆ ಪ್ರಾಧಿಕಾರ ನೀಡುವುದು.
2. ನಕಲಿ ಔಷಧಗಳ ಮತ್ತು ಕಾಂತಿವರ್ಧಕಗಳ ತಯಾರಿಕೆಯಲ್ಲಿ ನಿರತರಾದವರ ಬಗ್ಗೆ ಪರಿವೀಕ್ಷಣಾ ಸಿಬ್ಬಂದಿ ವರ್ಗದವರು ಎಚ್ಚರಿಕೆ ವಹಿಸುವುದು.
3. ನಿಗದಿಪಡಿಸಿದ ಗುಣಮಟ್ಟಗಳಿಗನುಸಾರವಾಗಿ ಔಷಧ ಮತ್ತು ಕಾಂತಿವರ್ಧಕ ವಸ್ತುಗಳು ಇವೆಯೇ ಎಂಬುದನ್ನು ಪರಿವೀಕ್ಷಿಸುವ ಸಲುವಾಗಿ ಔಷಧ ತಯಾರಿಕಾ ಹಾಗೂ ಮಾರಾಟ ಘಟಕಗಳಿಂದ ಔಷಧ ಮತ್ತು ಕಾಂತಿವರ್ಧಕಗಳ ಮಾದರಿಯನ್ನು ಪಡೆದುಕೊಂಡು ಅವುಗಳನ್ನು ವೈಜ್ಞಾನಿಕ ವಿಶ್ಲೇಷಣೆಗೆ ಒಳಪಡಿಸುವುದರ ಮೂಲಕ ಅವುಗಳ ಗುಣಮಟ್ಟವನ್ನು ನಿಶ್ಚಯ ಪಡಿಸುವುದು.

ಔಷಧ ನಿಯಂತ್ರಣ ಇಲಾಖೆಯು ಮೂರು ಭಾಗಗಳನ್ನು ಹೊಂದಿದೆ.

1. ಆಡಳಿತ ಮತ್ತು ಅಮಲು ಜಾರಿ
2. ಔಷಧ ಪರೀಕ್ಷಾ ಪ್ರಯೋಗಶಾಲೆ
3. ಫಾರ್ಮಸಿ ಶಿಕ್ಷಣ.

### (1) ಆಡಳಿತ ಮತ್ತು ಅಮಲು ಜಾರಿ.—

#### (ಅ) ಕೇಂದ್ರ ಸ್ಥಾನ ಸಂಘಟನೆ.—

ಔಷಧ ನಿಯಂತ್ರಣ ಇಲಾಖೆಯ ಹಾಗೂ ನಿಯಂತ್ರಣ ಪ್ರಾಧಿಕಾರದ ಮುಖ್ಯಸ್ಥರಾಗಿ ಔಷಧ ನಿಯಂತ್ರಣಾಧಿಕಾರಿಯವರು ಕಾರ್ಯ ನಿರ್ವಹಿಸುತ್ತಿದ್ದಾರೆ. ಔಷಧ ನಿಯಂತ್ರಣಾಧಿಕಾರಿಯವರೊಂದಿಗೆ ಒಬ್ಬ ಅಪರ ಔಷಧ ನಿಯಂತ್ರಕರು, ಮೂವರು ಉಪ ಔಷಧ ನಿಯಂತ್ರಕರು ಮತ್ತು

ಮೂವರು ಸಹಾಯಕ ಔಷಧ ನಿಯಂತ್ರಣಾಧಿಕಾರಿಗಳು ಹಾಗೂ ಐದು ಜನ ಔಷಧ ಪರಿವೀಕ್ಷಕರುಗಳು ಕೇಂದ್ರ ಕಾರ್ಯಸ್ಥಾನದಲ್ಲಿದ್ದು ಸಹಕರಿಸುವರು. ರಾಜ್ಯದಲ್ಲಿ ಕಾಲಕಾಲಕ್ಕೆ ನಡೆಯುವ ಡಿಪ್ಲೊಮಾ ಫಾರ್ಮಸಿ ಪರೀಕ್ಷೆಗಳ ಸಲುವಾಗಿಯೇ ಪರೀಕ್ಷಾ ಪ್ರಾಧಿಕಾರ ಮಂಡಳಿಗೇ ಪ್ರತ್ಯೇಕವಾಗಿ ಒಬ್ಬ ಸಹಾಯಕ ಔಷಧ ನಿಯಂತ್ರಣಾಧಿಕಾರಿಗಳಿದ್ದಾರೆ. ಅಲ್ಲದೆ, ಪ್ರಾಧಿಕಾರ ಮಂಡಲಿಯಲ್ಲಿ ಒಬ್ಬರು ಛೇರಮನ್ ಹಾಗೂ ಒಬ್ಬ ಸದಸ್ಯ ಕಾರ್ಯದರ್ಶಿಯವರು ಅಧಿಕಾರ ಹೊಂದಿರುತ್ತಾರೆ.

(ಆ) ವಿಭಾಗೀಯ ಮತ್ತು ಜಿಲ್ಲಾ ಕಛೇರಿಗಳು.—

ಇಲಾಖೆಯ ಸುಸೂತ್ರ ಕಾರ್ಯನಿರ್ವಹಣೆಗೆ ಆರು ವಿಭಾಗೀಯ ಕಾರ್ಯಾಲಯಗಳು ಮತ್ತು ಪ್ರತಿ ಜಿಲ್ಲೆಯಲ್ಲಿಯೂ ಒಂದು ಔಷಧ ಪರಿವೀಕ್ಷಕರ ಕಾರ್ಯಾಲಯವೂ ಕೆಲಸ ಮಾಡುತ್ತಿದೆ. ಬೆಂಗಳೂರನ್ನು ಹೊರತು ಪಡಿಸಿ ಪ್ರತಿ ವಿಭಾಗೀಯ ಕಛೇರಿಯಲ್ಲಿಯೂ ಇಬ್ಬರು ಸಹಾಯಕ ಔಷಧಿ ನಿಯಂತ್ರಣಾಧಿಕಾರಿಗಳ ಆಡಳಿತಕ್ಕೆ ಒಳಪಟ್ಟಿದ್ದು ಜಿಲ್ಲೆಯ ಔಷಧ ಪರಿವೀಕ್ಷಕರು ಅವರಿಗೆ ಸಹಾಯಕ ರಾಗಿದ್ದಾರೆ. ಬೆಂಗಳೂರಿನ ವಿಭಾಗೀಯ ಕಛೇರಿಯಲ್ಲಿ ಮೂವರು ಸಹಾಯಕ ಔಷಧ ನಿಯಂತ್ರಕರು ಕಾರ್ಯ ನಿರ್ವಹಿಸುತ್ತಿದ್ದಾರೆ. ವಿಭಾಗೀಯ ಸಹಾಯಕ ಔಷಧ ನಿಯಂತ್ರಕರು ಔಷಧಗಳ ಮಾರಾಟ ಪರವಾನಗಿ ನೀಡುವಲ್ಲಿ ಪರವಾನಗಿ ಪ್ರಾಧಿಕಾರಿಯವರಾಗಿದ್ದಾರೆ.

ಇಲಾಖೆಯಲ್ಲಿರುವ ಪ್ರತಿಯೊಂದು ವಿಭಾಗೀಯ ಕಛೇರಿಯೂ 3 ಜಿಲ್ಲೆಗಳಿಂದ 4 ರವರೆಗೂ ಜಿಲ್ಲೆಗಳ ಕಾರ್ಯವ್ಯಾಪ್ತಿಯ ಕ್ಷೇತ್ರಾಧಿಕಾರ ಹೊಂದಿರುತ್ತದೆ. ಇಂತಹ ಆರು ವಿಭಾಗೀಯ ಕಛೇರಿಗಳು ಬೆಂಗಳೂರು. ಬಳ್ಳಾರಿ, ಬೆಳಗಾವಿ, ಮೈಸೂರು, ಮಂಗಳೂರು ಮತ್ತು ಗುಲ್ಬರ್ಗಾಗಳಲ್ಲಿದ್ದು, ಪ್ರತಿ ಜಿಲ್ಲೆಯ ಕೇಂದ್ರ ಕಾರ್ಯಸ್ಥಾನದಲ್ಲೂ ಒಂದು ಜಿಲ್ಲಾ ಔಷಧ ಪರಿವೀಕ್ಷಕರ ಕಾರ್ಯಾಲಯ ಇದೆ. ಈ ಬಗೆಗಿನ ವಿವರಗಳು ಕೆಳಕಂಡಂತಿವೆ.

ಪ್ರತಿ ವಿಭಾಗೀಯ ಕಛೇರಿಗಳಿಗೆ ಒಳಪಟ್ಟಿರುವ ಜಿಲ್ಲೆಗಳು ಕೆಳಕಂಡಂತಿವೆ

| ಕ್ರಮಸಂಖ್ಯೆ | ವಿಭಾಗದ ಹೆಸರು | ಒಳಪಟ್ಟ ಜಿಲ್ಲೆಗಳು |
|---|---|---|
| 1 | ಬೆಂಗಳೂರು ವಿಭಾಗ | 1) ಬೆಂಗಳೂರು ಜಿಲ್ಲೆ(ನಗರ ಮತ್ತು ಗ್ರಾಮಾಂತರ)<br>2) ಕೋಲಾರ ಜಿಲ್ಲೆ<br>3) ತುಮಕೂರು ಜಿಲ್ಲೆ |
| 2 | ಬೆಳಗಾವಿ ವಿಭಾಗ | 1) ಬೆಳಗಾವಿ ಜಿಲ್ಲೆ<br>2) ಧಾರವಾಡ ಜಿಲ್ಲೆ<br>3) ಉತ್ತರ ಕನ್ನಡ ಜಿಲ್ಲೆ |
| 3 | ಬಳ್ಳಾರಿ ವಿಭಾಗ | 1) ಬಳ್ಳಾರಿ ಜಿಲ್ಲೆ<br>2) ರಾಯಚೂರು ಜಿಲ್ಲೆ<br>3) ಚಿತ್ರದುರ್ಗ ಜಿಲ್ಲೆ |
| 4 | ಗುಲ್ಬರ್ಗಾ ವಿಭಾಗ | 1) ಗುಲ್ಬರ್ಗಾ ಜಿಲ್ಲೆ<br>2) ಬಿಜಾಪುರ ಜಿಲ್ಲೆ<br>3) ಬೀದರ್ ಜಿಲ್ಲೆ |
| 5 | ಮೈಸೂರು ವಿಭಾಗ | 1) ಮೈಸೂರು ಜಿಲ್ಲೆ<br>2) ಮಂಡ್ಯ ಜಿಲ್ಲೆ<br>3) ಕೊಡಗು ಜಿಲ್ಲೆ |
| 6 | ಮಂಗಳೂರು ವಿಭಾಗ | 1) ದಕ್ಷಿಣ ಕನ್ನಡ ಜಿಲ್ಲೆ<br>2) ಶಿವಮೊಗ್ಗ ಜಿಲ್ಲೆ<br>3) ಹಾಸನ ಜಿಲ್ಲೆ<br>4) ಚಿಕ್ಕಮಗಳೂರು ಜಿಲ್ಲೆ |

ಕೋಲಾರ, ತುಮಕೂರು, ಧಾರವಾಡ, ಉತ್ತರ ಕನ್ನಡ, ರಾಯಚೂರು ಚಿತ್ರದುರ್ಗ, ಬಿಜಾಪುರ, ಬೀದರ್, ಶಿವಮೊಗ್ಗ, ಹಾಸನ, ಚಿಕ್ಕಮಗಳೂರು, ಮಂಡ್ಯ ಮತ್ತು ಕೊಡಗು ಜಿಲ್ಲೆಯ ಪ್ರತಿಯೊಂದು ಕಛೇರಿಗಳಿಗೆ ಒಬ್ಬರು ಔಷಧ ಪರಿವೀಕ್ಷಕರು ಮುಖ್ಯಸ್ಥರಾಗಿದ್ದಾರೆ.

## ಔಷಧ ಮತ್ತು ಕಾಂತಿವರ್ಧಕ ಅಧಿನಿಯಮ ಮತ್ತು ಅದರ ಮೇರೆಗಿನ ನಿಯಮಗಳ ಜಾರಿ

1992–93ನೇ (ಏಪ್ರಿಲ್ 1992ರಿಂದ 31ನೇ ಡಿಸೆಂಬರ್ 1992)ರ ಅವಧಿಯಲ್ಲಿ ಈ ಅಧಿನಿಯಮ ಹಾಗೂ ಅದರ ಮೇರೆಗಿನ ನಿಯಮಗಳ ಮೇರೆಗೆ ಹೂಡಲಾದ ಕಾನೂನು ವ್ಯವಹರಣೆಗಳ ವಿವರಗಳು ಕೆಳಕಂಡಂತಿವೆ.—

| | | | |
|---|---|---|---|
| 1 | ವರ್ಷದ ಪ್ರಾರಂಭದಲ್ಲಿ ಇತ್ಯರ್ಥವಾಗದೇ ಉಳಿದಿದ್ದ ಕಾನೂನು ವ್ಯವಹರಣೆಗಳು (1–4–92 ರಂದು) | ... | 120 |
| 2 | 1992–93ನೇ ಸಾಲಿಗೆ (ಡಿಸೆಂಬರ್ 31ರ ತನಕ) ಹೂಡಿದ ಕಾನೂನು ವ್ಯವಹರಣೆಗಳು | ... | 11 |
| 3 | ಒಟ್ಟು (ಡಿಸೆಂಬರ್ 31ರ ತನಕ) | ... | 131 |
| 4 | ಇತ್ಯರ್ಥವಾದ ಕಾನೂನು ವ್ಯವಹರಣೆಗಳು (ಡಿಸೆಂಬರ್ 31ರ ತನಕ) | ... | 31 |
| 5 | ನಿರ್ದೋಷಿಯೆಂದು ತೀರ್ಮಾನವಾಗಿ ಬಿಡುಗಡೆ ಮಾಡಲಾದ ಮೊಕದ್ದಮೆಗಳು (ಡಿಸೆಂಬರ್ 31ರ ತನಕ) | ... | 14 |
| 6 | ದೋಷ ಸಿದ್ಧವಾದ ಮೊಕದ್ದಮೆಗಳು (ಡಿಸೆಂಬರ್ 31ರ ತನಕ) | ... | 17 |
| 7 | 1992ರ ಡಿಸೆಂಬರ್ ಕಡೆಯಲ್ಲಿ ಇತ್ಯರ್ಥವಾಗದೆ ಉಳಿದಿದ್ದ ಕಾನೂನು ವ್ಯವಹರಣೆಗಳು | ... | 100 |

1-4-92 ರಿಂದ 31-12-92ರ ಅವಧಿಯಲ್ಲಿ 2 6 ಔಷಧ ಉತ್ಪಾದನಾ ಘಟಕಗಳನ್ನು 8993 ಮಾರಾಟ ಆವರಣಗಳನ್ನು ಮತ್ತು 68 ಆಸ್ಪತ್ರೆಗಳನ್ನೂ ಪರಿವೀಕ್ಷಿಸಲಾಯಿತು.

### ಔಷಧ ತಯಾರಿಕಾ ಘಟಕಗಳು.—

ಅಲೋಪತಿ ಔಷಧಗಳು ಮತ್ತು ಕಾಂತಿವರ್ಧಕಗಳ ಉತ್ಪಾದನಾ ಘಟಕಗಳು ಮತ್ತು ಅವುಗಳಿಗೆ ಕೊಟ್ಟ ಪರವಾನಗಿಗಳು ಕೆಳಕಂಡಂತಿವೆ (31ನೇ ಡಿಸೆಂಬರ್ 1992)

| ವರ್ಗ | ತಯಾರಕರುಗಳ ಒಟ್ಟು ಸಂಖ್ಯೆ | | | ಉತ್ಪಾದನಾ ಲೈಸನ್ಸ್‌ಗಳ ಒಟ್ಟು ಸಂಖ್ಯೆ | | |
|---|---|---|---|---|---|---|
| | ಸ್ವಂತ | ಸಾಲ | ಒಟ್ಟು | ಸ್ವಂತ | ಸಾಲ | ಒಟ್ಟು |
| 1 ಅಲೋಪತಿ (ರೀಪ್ಯಾಕ್ ಅಥವಾ ಮರು ಕಟ್ಟಿದಂತಹವೂ ಸೇರಿ) | 246 | 149 | 395 | 349 | 204 | 553 |
| 2 ಕಾಂತಿವರ್ಧಕಗಳು : ಪ್ರಸಾಧನಗಳು | 80 | 2 | 82 | 80 | 2 | 82 |
| 3 ರಕ್ತನಿಧಿಗಳು | 50 | — | 50 | 50 | — | 50 |
| 4 ಅನುಮೋದಿತ ಪ್ರಯೋಗ ಶಾಲೆಗಳು | 2 | — | 2 | 2 | — | 2 |
| ಒಟ್ಟು | 378 | 151 | 529 | 481 | 206 | 687 |

## ಔಷಧ ಮಾರಾಟ ಆವರಣಗಳು :—

1992–93ನೇ ಸಾಲಿನ ಡಿಸೆಂಬರ್ 31ರಂದು ಇದ್ದ ಔಷಧ ಮಾರಾಟ ಆವರಣಗಳ ವಿಭಾಗೀಯ ಸಾಂಖ್ಯಿಕ ಅಂಕಿ ಅಂಶಗಳು ಕೆಳಕಂಡಂತಿವೆ.

| ವಿಭಾಗ | ನಿರ್ಬಂಧಿತ | ಚಿಲ್ಲರೆ | ಸಗಟು | ಚಿಲ್ಲರೆ ಮತ್ತು ಸಗಟು | ನಿರ್ಬಂಧಿತ ಮತ್ತು ಸಗಟು | ಒಟ್ಟು |
|---|---|---|---|---|---|---|
| ಬೆಂಗಳೂರು | 554 | 2395 | 1008 | — | — | 3957 |
| ಬೆಳಗಾವಿ | 139 | 706 | 312 | 306 | 86 | 1549 |
| ಬಳ್ಳಾರಿ | 44 | 491 | 144 | 201 | 17 | 897 |
| ಮಂಗಳೂರು | 256 | 456 | 317 | 280 | 35 | 1344 |
| ಮೈಸೂರು | 127 | 361 | 113 | 141 | 15 | 757 |
| ಗುಲ್ಬರ್ಗಾ | 53 | 658 | 145 | 118 | 7 | 981 |
| ಒಟ್ಟು – | 1173 | 5067 | 2039 | 1046 | 160 | 9485 |

ಟಿಪ್ಪಣಿ :– 1-4-92 ರಿಂದ 31–12–1992ರ ವರೆಗೆ, ಅಂಗಡಿಗಳನ್ನು ಮುಚ್ಚಿದ ಕಾರಣ, ಸಂಘಟನೆ ಬದಲಾವಣೆ, ಸಂಸ್ಥೆಯು ಬದಲಾವಣೆ, ಪರವಾನಗಿ ನವೀಕರಣ ಮಾಡದ ಕಾರಣ 2539 ಮಾರಾಟ ಸಂಸ್ಥೆಗಳ ಪರವಾನಗಿಗಳನ್ನು ರದ್ದುಗೊಳಿಸಲಾಗಿದೆ.

## 1987ರ ಔಷಧಗಳ (ಬೆಲೆನಿಯಂತ್ರಣ) ಆದೇಶದ ಜಾರಿ :—

1992-93ನೇ ಡಿಸೆಂಬರ್ 31ರ ವರೆಗೆ ಈ ಆದೇಶದ ಜಾರಿಯ ಮೇರೆಗೆ ಹೂಡಲಾದ ಕಾನೂನು ವ್ಯವಹರಣೆಗಳ ಅಂಕಿ ಅಂಶಗಳು ಕೆಳಕಂಡಂತಿವೆ.—

| | | |
|---|---|---|
| 1 | ವರ್ಷದ ಪ್ರಾರಂಭದಲ್ಲಿ ಇತ್ಯರ್ಥವಾಗದೇ ಉಳಿದಿದ್ದ ಕಾನೂನು ವ್ಯವಹರಣೆಗಳು(1–4–92ರಂದು) ... | 39 |
| 2 | ಹೂಡಿದ ಕಾನೂನು ವ್ಯವಹರಣೆಗಳು ಡಿಸೆಂಬರ್ 31ರವರೆಗೆ ... | 1 |
| 3 | ಒಟ್ಟು ಡಿಸೆಂಬರ್ 31ರವರೆಗೆ ... | 40 |
| 4 | ತೀರ್ಮಾನವಾದ ಕಾನೂನು ವ್ಯವಹರಣೆಗಳು ... | 4 |
| 5 | ನಿರ್ದೋಷಿಯೆಂದು ತೀರ್ಮಾನವಾಗಿ ಬಿಡುಗಡೆಯಾದ ಪ್ರಕರಣಗಳು (ಡಿಸೆಂಬರ್ 31ರವರೆಗೆ) ... | 4 |
| 6 | ದೋಷ ಸಿದ್ಧವಾದ ಪ್ರಕರಣಗಳು (ಡಿಸೆಂಬರ್ 31ರವರೆಗೆ) ... | — |
| 7 | ಇತ್ಯರ್ಥವಾಗದೇ ಉಳಿದಿರುವ ಕಾನೂನು ವ್ಯವಹರಣೆಗಳು (ಡಿಸೆಂಬರ್ 31ರಂದು) ... | 36 |

1992–93ನೇ ಸಾಲಿನಲ್ಲಿ ಔಷಧ ಮತ್ತು ಕಾಂತಿವರ್ಧಕ ಅಧಿನಿಯಮ 1940 ಮತ್ತು ಅದರ ಮೇರೆಗಿನ ನಿಯಮಗಳ ಪ್ರಕಾರ 1-4-92 ರಿಂದ 31–12–92ರವರೆಗೆ 68 ದೂರುಗಳು ಹಾಗೂ ಔಷಧಗಳ (ಬೆಲೆ ನಿಯಂತ್ರಣ) ಆದೇಶ 1987ರ ಪ್ರಕಾರ 20 ದೂರುಗಳು ಬಂದಿವೆ. ಔಷಧ ಮತ್ತು ಕಾಂತಿವರ್ಧಕಗಳ ಅಧಿನಿಯಮ 1940 ಮತ್ತು ಅದರ ಮೇರೆಗಿನ ನಿಯಮಗಳ ಪ್ರಕಾರ 117 ದೂರುಗಳನ್ನು ಹಾಗೂ ಔಷಧ (ಬೆಲೆ ನಿಯಂತ್ರಣ) ಆದೇಶ 1979 ಹಾಗೂ 1987ರ ಪ್ರಕಾರ 13 ದೂರುಗಳನ್ನು ತನಿಖೆ ಮಾಡಿ ಈ ಬಗ್ಗೆ ಸೂಕ್ತ ಕ್ರಮವನ್ನು ತೆಗೆದುಕೊಳ್ಳಲಾಗಿದೆ.

## ಅತ್ಯಾವಶ್ಯಕ ಔಷಧಗಳ ಪೂರೈಕೆಯ ಮೇಲ್ವಿಚಾರಣೆ

ಉತ್ಪಾದಕರುಗಳು ಹಾಗೂ ಸಂಬಂಧಪಟ್ಟ ಔಷಧ ನಿಯಂತ್ರಣಾಧಿಕಾರಿಗಳನ್ನು ನೇರವಾಗಿ ಸಂಪರ್ಕಿಸುವ ಮೂಲಕ ಜೀವ ರಕ್ಷಿಸುವ ಅತ್ಯಾವಶ್ಯಕ ಔಷಧಗಳ ಲಭ್ಯತೆಗಳನ್ನು ಖಚಿತಪಡಿಸಿ ಕೊಳ್ಳಲಾಗುವುದು. ಈ ಸಂಬಂಧದಲ್ಲಿನ ಮಾಸಿಕ ವರದಿಗಳನ್ನು ದೆಹಲಿಯ ಪೆಟ್ರೋಲಿಯಂ ಮತ್ತು ರಾಸಾಯನಿಕ ಸಚಿವಾಲಯಕ್ಕೆ ಕಳುಹಿಸಿಕೊಡಲಾಗುತ್ತಿದೆ.

## ಮಾದಕ ಔಷಧಗಳ ಹಾಗೂ ಮಾನಸಿಕ ಭ್ರಮೆಯನ್ನುಂಟು ಮಾಡುವ ಇತರೆ ಔಷಧಗಳ ದುರುಪಯೋಗವನ್ನು ತಡೆಗಟ್ಟುವುದು

ಭಾರತ ಸರ್ಕಾರವು ಮಾದಕ ಔಷಧಗಳ ಹಾಗೂ ಮಾನಸಿಕ ಭ್ರಮೆಯನ್ನುಂಟು ಮಾಡುವ ವಸ್ತುಗಳ ಅಧಿನಿಯಮ 1985ನ್ನು ಹೊಸದಾಗಿ ಹೊರಡಿಸಿದೆ. ಈ ಅಧಿನಿಯಮವು 14ನೇ ನವೆಂಬರ್ 1985 ರಿಂದ ಜಾರಿಗೆ ಬಂದಿದೆ. ಈ ಅಧಿನಿಯಮದ 41ನೇ ಮತ್ತು 53ನೇ ಸೆಕ್ಷನ್‌ನ ಅಡಿ ರಾಜ್ಯ ಸರ್ಕಾರವು ಹೆಚ್‌ಡಿ 214 ಇಡಿಸಿ 85 ಮತ್ತು ಹೆಚ್‌ಡಿ 214 ಇಡಿಸಿ 85 (2) ದಿನಾಂಕ 11ನೇ ಸೆಪ್ಟೆಂಬರ್ 1986ರ ಅಧಿಸೂಚನೆಯ ಮೂಲಕ ಔಷಧ ನಿಯಂತ್ರಣ ಇಲಾಖೆಯ ಔಷಧ ಪರಿವೀಕ್ಷಕರುಗಳಿಗೆ ಈ ಅಧಿನಿಯಮಕ್ಕೊಳಪಡುವ ಅಪರಾಧಗಳನ್ನು ತನಿಖೆ ಮಾಡುವ ಅಧಿಕಾರ ನೀಡಿದೆ.

ಮಾದಕ ಔಷಧಗಳು ಹಾಗೂ ಮಾನಸಿಕ ಭ್ರಮೆಯನ್ನುಂಟು ಮಾಡುವ ಔಷಧಗಳ ದುರುಪಯೋಗ ತಡೆಗಟ್ಟುವ ದಿಸೆಯಲ್ಲಿ ಈ ಇಲಾಖೆ ಎಚ್ಚರವಹಿಸುತ್ತಿದೆ. ಇಂತಹ ಔಷಧಗಳ ತಯಾರಿಕೆ ಹಾಗೂ ಮಾರಾಟದ ಬಗ್ಗೆ ಬಿಗಿಯಾದ ನಿಯಂತ್ರಣವನ್ನು ಜಾರಿಗೆ ತಂದಿದೆ.

### ಔಷಧ ತಯಾರಿಕಾ ಸಂಸ್ಥೆಗಳಿಗೆ ಮಾದಕ ವಸ್ತುಗಳ ಹಂಚಿಕೆ ಪ್ರಮಾಣ

| ಕ್ರಮ ಸಂಖ್ಯೆ | ಔಷಧಗಳ ಹೆಸರು | ಹಂಚಿಕೆಯಾದ ಪ್ರಮಾಣ ಕೇಜಿಗಳಲ್ಲಿ 1992ರ ಡಿಸೆಂಬರ್ ಕೊನೆಯವರೆಗೆ |
|---|---|---|
| 1 | ಕೋಡಿನ್ | 796.50 |
| 2 | ಈಥೈಲ್ ಮಾರ್ಫಿನ್ (ಡಯೋನಿನ್) | 15.00 |
| 3 | ಔಷಧಿಯ ಅಫೀಮು | 01.50 |
| 4 | ಡೆಕ್ಸ್ಟ್ರೋ ಪ್ರೊಫಾಕ್ಸಿಫೆನ್ | 600.00 |

### 2 ಔಷಧ ಪರೀಕ್ಷಾ ಪ್ರಯೋಗಾಲಯ :—

ಕರ್ನಾಟಕ ರಾಜ್ಯ ಔಷಧ ನಿಯಂತ್ರಣ ಇಲಾಖೆಯ ಆಡಳಿತ ಹತೋಟಿಗೆ ಒಳಪಟ್ಟಿರುವ ಒಂದು ಸುಸಜ್ಜಿತ ಔಷಧ ಪರೀಕ್ಷಾ ಪ್ರಯೋಗಾಲಯವು ಕೆಲಸ ಮಾಡುತ್ತಿದೆ. ಇದನ್ನು ಮೂರನೇ ಪಂಚವಾರ್ಷಿಕ ಯೋಜನೆಯಲ್ಲಿ ಪ್ರಾರಂಭಿಸಲಾಯಿತು.

ಈ ಪ್ರಯೋಗಶಾಲೆಯು ವ್ಯಾಕ್ಸಿನ್, ಸೀರಾ ಮತ್ತು ರಕ್ತವನ್ನು ಹೊರತುಪಡಿಸಿ ಎಲ್ಲಾ ವಿಧವಾದ ಔಷಧಗಳನ್ನು ವಿಶ್ಲೇಷಿಸುವ ಸಾಮರ್ಥ್ಯ ಹೊಂದಿದೆ. ಈ ಔಷಧ ಪ್ರಯೋಗಾಲಯದ ಮುಖ್ಯ ಕಾರ್ಯ ಚಟುವಟಿಕೆಗಳು ಈ ಕೆಳಕಂಡಂತಿವೆ.

1 ಔಷಧಗಳ ಸಂಯೋಜನೆಯ ಗುಣಮಟ್ಟ, ಪರಿಶುದ್ಧತೆ ಮತ್ತು ಶಕ್ತಿ ತಿಳಿಯುವ ಉದ್ದೇಶಕ್ಕಾಗಿ ಔಷಧ ಪರಿವೀಕ್ಷಕರು ಕಳುಹಿಸಿದ ಔಷಧ ಮತ್ತು ಕಾಂತಿವರ್ಧಕಗಳ ಕಾನೂನು ಬದ್ಧ ಮಾದರಿಗಳನ್ನು ಪರೀಕ್ಷಿಸುವುದು ಮತ್ತು ವಿಶ್ಲೇಷಿಸುವುದು ಹಾಗೂ ನಿಗದಿಪಡಿಸಿದ ನಮೂನೆಗಳಲ್ಲಿ ಪರೀಕ್ಷಾ ವರದಿಗಳನ್ನು ನೀಡುವುದು.

2 ದೆಹಲಿಯ ಕೇಂದ್ರ ಆಡಳಿತ ಪಾಂಡಿಚೇರಿ, ಕೇರಳ ಮತ್ತು ಮದ್ರಾಸಿನ ಕೇಂದ್ರೀಯ ಔಷಧ ಮಳಿಗೆಗಳು ಕಳುಹಿಸುವ ಕಾನೂನು ಬದ್ಧ ಮಾದರಿಗಳನ್ನು ಪರೀಕ್ಷಿಸುವುದು ಮತ್ತು ವಿಶ್ಲೇಷಿಸುವುದು ಹಾಗೂ ಈ ಬಗ್ಗೆ ನಿಗದಿಪಡಿಸಿದ ನಮೂನೆಗಳಲ್ಲಿ ಪರೀಕ್ಷಾ ವರದಿಗಳನ್ನು ನೀಡುವುದು.

3 ಔಷಧಗಳ ಗುಣಮಟ್ಟವನ್ನು ತಿಳಿಯಲು ಮಾದರಿಗಳನ್ನು ಪರೀಕ್ಷೆ ಮಾಡುವ ಮೂಲಕ ಸರ್ಕಾರಿ ಔಷಧ ಮಳಿಗೆ ಹಾಗೂ ರಾಜ್ಯದ ಇತರ ಸರ್ಕಾರೀ ಸಂಸ್ಥೆಗಳಿಗೆ ಔಷಧಗಳನ್ನು ಖರೀದಿ ಮಾಡಲು ನೆರವು ನೀಡುವುದು.

ಔಷಧ ಪರೀಕ್ಷಾ ಪ್ರಯೋಗಾಲಯಕ್ಕೆ ಇಬ್ಬರು ಅಧಿಕ್ಷಕರಿದ್ದು, ಒಬ್ಬರು ಕಚೇರಿಯ ಆಡಳಿತಕ್ಕೆ ಸಂಬಂಧಿಸಿದವರಾಗಿದ್ದು ಮತ್ತು ಮತ್ತೊಬ್ಬರು ಪ್ರಯೋಗಾಲಯಗಳ ಮೇಲುಸ್ತುವಾರಿ ಹೊಂದಿದವರಾಗಿದ್ದಾರೆ. ಇವರೊಂದಿಗೆ ಇಬ್ಬರು ಹಿರಿಯ ರಸಾಯನಜ್ಞರು, ಒಬ್ಬರು ಜೀವ ರಸಾಯನಜ್ಞರು, ಒಬ್ಬರು ಔಷಧ ವಿಜ್ಞಾನಿ, ಒಬ್ಬರು ಔಷಧ ಸಂಜ್ಞಾನಿ ಹಾಗೂ ಒಬ್ಬರು ಜೀವಾಣು ಶಾಸ್ತ್ರಜ್ಞರಿದ್ದಾರೆ.

ಪ್ರಯೋಗಶಾಲೆಯ ಅಧೀಕ್ಷಕರು, ಹಿರಿಯ ರಸಾಯನಜ್ಞ, ಜೀವ ರಸಾಯನಜ್ಞ, ಔಷಧ ವಿಜ್ಞಾನಿ ಮತ್ತು ಔಷಧ ಸಂಜ್ಞಾನಿ ಇವರುಗಳನ್ನು ಸರ್ಕಾರದ ವಿಶ್ಲೇಷಕರನ್ನಾಗಿ ಅಧಿಸೂಚಿಸಲಾಗಿದೆ. ಇವರುಗಳು ಲಸಿಕೆಗಳು ಹಾಗೂ ಸೀರಂಗಳನ್ನು ಹೊರತುಪಡಿಸಿ, ಎಲ್ಲಾ ವಿಧದ ಔಷಧಗಳು ಹಾಗೂ ಪ್ರಸಾಧನಗಳ ವಿಶ್ಲೇಷಕರಾಗಿದ್ದು, ಈ ಮೇಲೆ ಹೇಳಿರುವ ಎಲ್ಲಾ ರಾಜ್ಯಗಳ ಔಷಧ ವಿಶ್ಲೇಷಕರಾಗಿ ನಿಯುಕ್ತರಾಗಿದ್ದಾರೆ.

ಔಷಧ ಪ್ರಯೋಗಶಾಲೆಯು ಸದ್ಯಕ್ಕೆ ಕೆಳಕಂಡ ವಿಭಾಗಗಳನ್ನು ಹೊಂದಿದೆ.

1 ಔಷಧ ಮತ್ತು ರಸಾಯನ ಶಾಸ್ತ್ರ (ಫಾರ್ಮಸ್ಯೂಟಿಕಲ್ ಕೆಮಿಸ್ಟ್ರಿ)
2 ಸೂಕ್ಷ್ಮ ಜೀವಾಣು ವಿಜ್ಞಾನ (ಮೈಕ್ರೋಬಯಾಲಜಿ)
3 ಔಷಧ ವಿಜ್ಞಾನ (ಫಾರ್ಮಕಾಲಜಿ)
4 ಔಷಧ ಸಂಜ್ಞಾನ (ಫಾರ್ಮಕಾಗ್ನೊಸಿ)
5 ಜೀವಾಣು ವಿಜ್ಞಾನ (ಬ್ಯಾಕ್ಟೀರಿಯಾಲಜಿ)

ಒಂದು ಪರಿಪೂರ್ಣ ಪ್ರಾಣಿಶಾಲೆ ಸಹ ಈ ಔಷಧ ಪರೀಕ್ಷಾ ಪ್ರಯೋಗಶಾಲೆಯಲ್ಲಿದೆ. ಇದರ ಜವಾಬ್ದಾರಿ ಪಶುಸಂಗೋಪನಾ ಇಲಾಖೆಯಿಂದ ನಿಯೋಜಿತರಾದ ಪಶುವೈದ್ಯರಿಗೆ ಸೇರಿದೆ.

1992ರ ಏಪ್ರಿಲ್ 1 ರಿಂದ 1992 ಡಿಸೆಂಬರ್ ಕಡೆಯವರೆಗೆ ಈ ಪ್ರಯೋಗಶಾಲೆಯಲ್ಲಿ/ವಿಶ್ಲೇಷಣೆಗೆ ಬಂದ ಮಾದರಿಗಳ ವಿವರ ಕೆಳಕಂಡಂತಿವೆ:—

| | | | |
|---|---|---|---|
| 1 | ಔಷಧ ಪರಿವೀಕ್ಷಕರಿಂದ ಕಳುಹಿಸಲ್ಪಟ್ಟ ಕಾನೂನು ಬದ್ಧ ಮಾದರಿಗಳು 1992 ಡಿಸೆಂಬರ್ 31ರ ವರೆಗೆ | – | 2137 |
| 2 | ಸರ್ಕಾರಿ ಆಸ್ಪತ್ರೆಗಳು ಮತ್ತು ಸರ್ಕಾರಿ ಔಷಧ ಮಳಿಗೆಗಳು ಮತ್ತು ಔಷಧ ಪರಿವೀಕ್ಷಕರಿಂದ ಕಳುಹಿಸಲ್ಪಟ್ಟ ಅನೌಪಚಾರಿಕ ಮಾದರಿಗಳು | – | 24 |
| 3 | ಕರ್ನಾಟಕ ರಾಜ್ಯದ ಔಷಧ ತಯಾರಕರಿಂದ ಸ್ವೀಕರಿಸಲಾದ ಮಾದರಿಗಳು | – | – |
| | ಒಟ್ಟು | – | 2161 |
| | ಮುಂದುವರಿಸಲಾದ ಹಿಂದಿನ ವರ್ಷದಲ್ಲಿ ಉಳಿದಿದ್ದ ಮಾದರಿಗಳು | – | 693 |
| | ಒಟ್ಟು | – | 2854 |

ವಿಶ್ಲೇಷಿಸಲಾದ ಮಾದರಿಗಳು :

| | | | |
|---|---|---|---|
| 1 | ಒಟ್ಟು ವಿಶ್ಲೇಷಿಸಲಾದ ಮಾದರಿಗಳು (1992 ಡಿಸೆಂಬರ್ 31ರವರೆಗೆ) | – | 1906 |
| 2 | ಉತ್ತಮ ಗುಣಮಟ್ಟದವುಗಳಾಗಿ ಕಂಡು ಬಂದಿರುವ ಮಾದರಿಗಳು (1992 ಡಿಸೆಂಬರ್ 31ರವರೆಗೆ) | – | 1722 |
| 3 | ಉತ್ತಮ ಗುಣಮಟ್ಟದಲ್ಲವೆಂದು ಕಂಡು ಬಂದಿರುವ ಮಾದರಿಗಳು (1992 ಡಿಸೆಂಬರ್ 31ರವರೆಗೆ) | – | 160 |
| 4 | ಭಾಗಶಃ ವಿಶ್ಲೇಷಿಸಲಾದ ಮಾದರಿಗಳು (1992 ಡಿಸೆಂಬರ್ 31ರವರೆಗೆ) | – | 24 |

ಔಷಧ ಪರಿವೀಕ್ಷಣಾ ಪ್ರಯೋಗಾಲಯವು ಸುವ್ಯವಸ್ಥಿತ ಗ್ರಂಥಾಲಯವನ್ನು ಹೊಂದಿದ್ದು ಇದರಲ್ಲಿ ಎಲ್ಲಾ ಬಗೆಯ ಆಕರ ಗ್ರಂಥಗಳೂ ಹಾಗೂ ರಸಾಯನಿಕ ಸಂಗ್ರಹಗಳೂ ಲಭ್ಯವಿದೆ. ಸಿಬ್ಬಂದಿ ವರ್ಗಕ್ಕೆ ಪ್ರಪಂಚದಲ್ಲಿ ಔಷಧ ತಯಾರಿಕಾ ವಿಜ್ಞಾನದಲ್ಲಿ ಆಗುತ್ತಿರುವ ಇತ್ತೀಚಿನ ಬೆಳವಣಿಗೆ ಮತ್ತು ಸಂಶೋಧನೆಗಳ ಬಗ್ಗೆ ಕಾಲೋಚಿತ ಮಾಹಿತಿಯನ್ನು ಒದಗಿಸುವ ಸಲುವಾಗಿ ಹಲವಾರು ಭಾರತೀಯ ಹಾಗೂ ವಿದೇಶಿ ನಿಯತಕಾಲಿಕ ಪತ್ರಿಕೆಗಳನ್ನು ತರಿಸಲಾಗುತ್ತಿದೆ. ಈ ಗ್ರಂಥಾಲಯ ಸೌಲಭ್ಯವನ್ನು ನಮ್ಮ ರಾಜ್ಯದ ಔಷಧ ತಯಾರಿಕರಿಗೂ ಔಷಧ ವಿಜ್ಞಾನ ಅಭ್ಯಸಿಸುತ್ತಿರುವ ವಿದ್ಯಾರ್ಥಿಗಳಿಗೂ ಮತ್ತು ಔಷಧ ವಿಜ್ಞಾನದ ಬಗ್ಗೆ ಸಂಶೋಧನೆ ನಡೆಸುತ್ತಿರುವ ಅಭ್ಯರ್ಥಿಗಳಿಗೂ ಒದಗಿಸಲಾಗಿದೆ. ಅರ್ಹ ಗ್ರಂಥಪಾಲಕರನ್ನು ಈ ಗ್ರಂಥಾಲಯ ಹೊಂದಿದೆ.

## 3. ಫಾರ್ಮಸಿ ಶಿಕ್ಷಣ

ಫಾರ್ಮಸಿ ಶಿಕ್ಷಣಕ್ಕೆ ಸಂಬಂಧಿಸಿದಂತೆ, ಎರಡು ಪ್ರಮುಖ ಅಂಗಗಳಿವೆ. ಅವುಗಳೆಂದರೆ.—

(ಅ) ಸರ್ಕಾರಿ ಔಷಧ ವಿಜ್ಞಾನ ಮಹಾವಿದ್ಯಾಲಯ, ಬೆಂಗಳೂರು.

(ಆ) ಪರೀಕ್ಷಾ ಪ್ರಾಧಿಕಾರ ಮಂಡಳಿ ಬೆಂಗಳೂರು.

### (ಅ) ಸರ್ಕಾರೀ ಔಷಧ ವಿಜ್ಞಾನ ಮಹಾವಿದ್ಯಾಲಯ, ಬೆಂಗಳೂರು :—

ಔಷಧ ನಿಯಂತ್ರಣ ಇಲಾಖೆಯ ಆಡಳಿತದ ಹತೋಟಿಯಲ್ಲಿ ಸರ್ಕಾರಿ ಔಷಧ ವಿಜ್ಞಾನ ಮಹಾ ವಿದ್ಯಾಲಯ (ಸರ್ಕಾರಿ ಫಾರ್ಮಸಿ ಕಾಲೇಜು) 1964 ರಿಂದ ಬೆಂಗಳೂರಿನಲ್ಲಿ ಕಾರ್ಯ ನಿರ್ವಹಿಸುತ್ತಿದೆ. ಇಲ್ಲಿ ಡಿಪ್ಲೊಮ, ಪದವಿ ಹಾಗೂ ಸ್ನಾತಕೋತ್ತರ ಮಟ್ಟದವರೆಗೆ ಶಿಕ್ಷಣ ಪಡೆಯಲು ಸಕಲ ಸೌಲಭ್ಯಗಳಿವೆ. ಈ ಸಂಸ್ಥೆಯಲ್ಲಿ ಸ್ನಾತಕೋತ್ತರ ಪದವಿ ವ್ಯಾಸಂಗವನ್ನು ನಾಲ್ಕು ವಿಜ್ಞಾನ ವಿಭಾಗಗಳಲ್ಲಿ ಅಂದರೆ ಔಷಧ ಮತ್ತು ತಂತ್ರಜ್ಞಾನ (ಫಾರ್ಮಸ್ಯೂಟಿಕಲ್ ಟೆಕ್ನಾಲಜಿ) ಮತ್ತು ಔಷಧ ಶಾಸ್ತ್ರ (ಫಾರ್ಮಕಾಲಜಿ) ಔಷಧ ಸಂಜ್ಞಾನ (ಫಾರ್ಮಕಾಗ್ನೊಸಿ) ಮತ್ತು ಔಷಧ ರಸಾಯನ ಶಾಸ್ತ್ರ (ಫಾರ್ಮಸ್ಯೂಟಿಕಲ್ ಕೆಮಿಸ್ಟ್ರಿ) ಗಳಲ್ಲಿ ನಡೆಸಲು ಭಾರತ ಸರ್ಕಾರ ಶೇಕಡಾ 100 ಭಾಗ ಅನುದಾನ ನೀಡುತ್ತಿದೆ. ಇದರಂತೆ ಪ್ರತಿಯೊಂದು ವಿಭಾಗದಲ್ಲೂ 6 ವಿದ್ಯಾರ್ಥಿಗಳಿಗೆ ಶಿಕ್ಷಣ ನೀಡಲಾಗುತ್ತಿದೆ. ಈ ಮಹಾ ವಿದ್ಯಾಲಯದಲ್ಲಿ ಒಬ್ಬ ಪ್ರಾಂಶುಪಾಲರು, 6 ಪ್ರಾಧ್ಯಾಪಕರೂ, 9 ಸಹಾಯಕ ಪ್ರಾಧ್ಯಾಪಕರೂ ಹಾಗೂ 14 ಬೋಧಕರು ಕೆಲಸ ಮಾಡುತ್ತಿದ್ದಾರೆ. ಕರ್ನಾಟಕ ಸರ್ಕಾರವು ಈ ಮಹಾ ವಿದ್ಯಾಲಯಕ್ಕೆ 4 ಅಂತಸ್ತಿನ ಹೊಸ ಕಟ್ಟಡವನ್ನು ಕಟ್ಟುವ ಯೋಜನೆಗೆ ಅನುಮೋದನೆ ನೀಡಿದ್ದು. ಮೊದಲನೆಯ ಹಾಗೂ ಎರಡನೆಯ ಮಹಡಿಗಳ ಕಟ್ಟಡ ಪೂರ್ಣಗೊಂಡಿದ್ದು, ಅವುಗಳ ಲ್ಲಿ ಬೋಧಕ ಕೊಟ್ಟಡಿಗಳನ್ನು ಮತ್ತು ಪ್ರಯೋಗಾಲಯಗಳನ್ನು ನಡೆಸಲಾಗುತ್ತಿವೆ. ಇದಲ್ಲದೆ ಆಡಳಿತ ಕಛೇರಿ, ಅಧ್ಯಾಪಕರುಗಳ ಕೊಠಡಿ ಮತ್ತು ಗ್ರಂಥಾಲಯ ಸಹ ಈಗ ಪೂರ್ಣಗೊಂಡಿರುವ ಕಟ್ಟಡದಲ್ಲಿ ಇವೆ.

ಈ ವರ್ಷ ಬೆಂಗಳೂರು ಸರ್ಕಾರಿ ಔಷಧ ವಿಜ್ಞಾನ ಮಹಾ ವಿದ್ಯಾಲಯದಿಂದ ಬೆಂಗಳೂರು ವಿಶ್ವ ವಿದ್ಯಾನಿಲಯ ನಡೆಸುತ್ತಿರುವ ಪದವಿ ಪರೀಕ್ಷೆಗೆ ಕುಳಿತಿದ್ದ 28 ಜನ ವಿದ್ಯಾರ್ಥಿಗಳಲ್ಲಿ 18 ಜನರೂ ಮತ್ತು ಸ್ನಾತಕೋತ್ತರ ಪದವಿ ಪರೀಕ್ಷೆಯಲ್ಲಿ 21 ಜನ ವಿದ್ಯಾರ್ಥಿಗಳಲ್ಲಿ 21 ಜನರೂ ತೇರ್ಗಡೆಯಾಗಿದ್ದಾರೆ.

### (ಆ) ಪರೀಕ್ಷಾ ಪ್ರಾಧಿಕಾರ ಮಂಡಳಿ, ಬೆಂಗಳೂರು

ಕರ್ನಾಟಕ ಸರ್ಕಾರವು ರಾಜ್ಯದಲ್ಲಿ ಭಾರತದ ಫಾರ್ಮಸಿ ಪರಿಷತ್ತು ರೂಪಿಸಿರುವ ಶಿಕ್ಷಣ ನಿಯಮಗಳನ್ನು ಜಾರಿಗೆ ತರುವುದರ ಸಲುವಾಗಿ ಒಂದು ಪರೀಕ್ಷಾ ಪ್ರಾಧಿಕಾರ ಮಂಡಳಿಯನ್ನು ಅಪರ ಔಷಧ ನಿಯಂತ್ರಣಾಧಿಕಾರಿಗಳ ಅಧ್ಯಕ್ಷತೆಯಲ್ಲಿ ರಚಿಸಿದೆ. ಈ ಮಂಡಳಿಯಲ್ಲಿ ಒಬ್ಬ ಸದಸ್ಯ ಕಾರ್ಯದರ್ಶಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಈ ಮಂಡಳಿಯ ಆಡಳಿತವನ್ನು ಒಬ್ಬ ಸಹಾಯಕ ಔಷಧ ನಿಯಂತ್ರಣ ಅಧಿಕಾರಿಗಳು ನಿರ್ವಹಿಸುತ್ತಿದ್ದಾರೆ. ಈ ಮಂಡಳಿಯು ಡಿಪ್ಲೊಮ ಮಟ್ಟದ ಫಾರ್ಮಸಿ ಪರೀಕ್ಷೆಗಳನ್ನು ನಡೆಸುತ್ತಿದೆ. ಈ ವರ್ಷ ಖಾಸಗಿ ವಿದ್ಯಾ ಸಂಸ್ಥೆಗಳಿಂದ ಒಟ್ಟು 13,898 ವಿದ್ಯಾರ್ಥಿಗಳು ಪೂರ್ವ ಭಾವಿ ಡಿಪ್ಲೊಮ ಪರೀಕ್ಷೆಗೆ ಕುಳಿತಿದ್ದು ಅದರಲ್ಲಿ 3,074 ವಿದ್ಯಾರ್ಥಿಗಳು ತೇರ್ಗಡೆಯಾಗಿರುತ್ತಾರೆ. ಅಂತಿಮ ಪರೀಕ್ಷೆಯಲ್ಲಿ ಒಟ್ಟು 9,691 ವಿದ್ಯಾರ್ಥಿಗಳು ಕುಳಿತಿದ್ದು 1,767 ವಿದ್ಯಾರ್ಥಿಗಳು ತೇರ್ಗಡೆಯಾಗಿದ್ದಾರೆ.

## 1992-93ನೇ ವರ್ಷಕ್ಕೆ ಔಷಧ ನಿಯಂತ್ರಣ ಇಲಾಖೆಯ ಆಯುವ್ಯಯ
(ಹಂಚಿಕೆ ಮತ್ತು ವ್ಯಯ (ಲಕ್ಷ ರೂಪಾಯಿಗಳಲ್ಲಿ)

| ಕ್ರಮ ಸಂಖ್ಯೆ | ಆಯುವ್ಯಯ ಶೀರ್ಷಿಕೆ | ಹಂಚಿಕೆ 1992-93ಕ್ಕೆ (ಲಕ್ಷ ರೂ.ಗಳಲ್ಲಿ) | ವ್ಯಯ 1992-93 (ಲಕ್ಷ ರೂ.ಗಳಲ್ಲಿ) |
|---|---|---|---|
| 1. | ಯೋಜನೇತರ | 217.85 | 114.00 |
| 2. | ರಾಜ್ಯ ಯೋಜನೆ (ಒಟ್ಟು ಬಂಡವಾಳವೂ ಸೇರಿದಂತೆ) | 40.00 | 2.92 |
| 3. | ಕೇಂದ್ರ ಸರ್ಕಾರದ ಪುರಸ್ಕೃತ ಯೋಜನೆ | 16.00 | 10.09 |

ಟಿಪ್ಪಣಿ ;

ಡಿಸೆಂಬರ್ 1992ರ ವರೆಗೆ ಯೋಜನೇತರ ವ್ಯಯ ಅಂಕಣದಡಿಯಲ್ಲಿ ನೀಡಿರುವ ಸಂಖ್ಯೆಗಳು ಅಕ್ಟೋಬರ್ 1992ರ ವರೆಗಿನ ವ್ಯಯವನ್ನು ಮಾತ್ರ ಸೂಚಿಸುತ್ತವೆ. ಏಪ್ರಿಲ್ 1992 ರಿಂದ ಅಕ್ಟೋಬರ್ 1992ರ ವರೆಗಿನ ಈ ಸಂಖ್ಯೆಗಳನ್ನು ಮಹಾ ಲೇಖಪಾಲರ ಕಛೇರಿಯಲ್ಲಿನ ಸಂಖ್ಯೆಗಳೊಂದಿಗೆ ಹೋಲಿಸಿಯೇ ಪರಿಷ್ಕರಿಸಲಾಗಿದೆ. ನವೆಂಬರ್ ಮತ್ತು ಡಿಸೆಂಬರ್ 1992ರ ವ್ಯಯವನ್ನು ಮಹಾಲೇಖಪಾಲರ ಕಛೇರಿಯಲ್ಲಿ ಲಭ್ಯವಿರುವ ಸಂಖ್ಯೆಗಳೊಂದಿಗೆ ಹೋಲಿಸಿ, ಪರಿಷ್ಕರಿಸಿದ ನಂತರ ಕಳುಹಿಸಲಾಗುವುದು.

### ಔಷಧ ನಿಯಂತ್ರಣ ಇಲಾಖೆಯು 1992-93ರಲ್ಲಿ ಗಳಿಸಿದ ಆದಾಯ :—

1992-93ನೇ ಸಾಲಿನಲ್ಲಿ ಸೆಪ್ಟೆಂಬರ್ 31ರ ವರೆಗೆ ಒಟ್ಟು 2.18 ಲಕ್ಷ ರೂಪಾಯಿಗಳ ಆದಾಯವನ್ನು ವ್ಯಾಪಾರ ಹಾಗೂ ತಯಾರಿಕಾ ಪರವಾನಗಿಗಳ ಶುಲ್ಕ, ಔಷಧ ಪರಿವೀಕ್ಷಣಾ ಶುಲ್ಕ ಹಾಗೂ ಫಾರ್ಮಸಿಗಳ ವ್ಯಾಪಾರದ ಮೂಲಕ ಗಳಿಸಿದೆ. ಅಲ್ಲದೆ: 11.82 ಲಕ್ಷ ರೂ.ಗಳನ್ನು ಪರೀಕ್ಷಾ ಪ್ರಾಧಿಕಾರ ಮಂಡಳಿಯು ಪರೀಕ್ಷಾ ಶುಲ್ಕವಾಗಿ ಗಳಿಸಿದೆ.

ಟಿಪ್ಪಣಿ:—

ಅಕ್ಟೋಬರ್, ನವೆಂಬರ್ ಮತ್ತು ಡಿಸೆಂಬರ್ 1992ರ ಆದಾಯದ ಬಗೆಗಿನ ವಿವರಗಳು ಇಲಾಖೆಯ ಅಧೀನ ಅಧಿಕಾರಿಗಳಿಂದ ಬರಬೇಕಾಗಿದ್ದು ಅನಂತರ ಮಹಾಲೇಖಪಾಲರ ಕಛೇರಿಯಲ್ಲಿನ ಸಂಖ್ಯೆಗಳೊಂದಿಗೆ ಹೋಲಿಸಿ ಪರಿಷ್ಕರಿಸಬೇಕಾಗಿದೆ. ಹೀಗೆ ಹೋಲಿಸಿ ಪರಿಷ್ಕರಿಸಲಾದ ನಂತರದ ವಿವರಗಳನ್ನು ಕಾಲಾನುಕ್ರಮದಲ್ಲಿ ಕಳುಹಿಸಿ ಕೊಡಲಾಗುವುದು.

### ಇಲಾಖೆಯ 1992-93ನೇ ಸಾಲಿನ ಪ್ರಮುಖ ಸಾಧನೆಗಳು.

I. ಅಮಲು ಜಾರಿ:—

1. ಬೆಂಗಳೂರು ವಿಭಾಗದ ಸಹಾಯಕ ಔಷಧ ನಿಯಂತ್ರಕರ ಕಛೇರಿಯ ಅಧಿಕ ಕಾರ್ಯಭಾರದ ಒತ್ತಡದಿಂದಾಗಿ ಅಧಿಕ ಸಿಬ್ಬಂದಿ ವರ್ಗವನ್ನು ಮಂಜೂರು ಮಾಡಲಾಗಿದೆ.

2. ಇಲಾಖೆಯ ಚಟುವಟಿಕೆಗಳನ್ನು ಗಣಕೀಕರಣಗೊಳಿಸುವ ಸಲುವಾಗಿ ಗಣಕ ಯಂತ್ರವನ್ನು ಖರೀದಿಸಲಾಗಿದೆ.

3. ಕೇಂದ್ರ ಕಾರ್ಯಸ್ಥಾನದಲ್ಲಿ ಜಾಗೃತ ವಿಭಾಗವೊಂದನ್ನು ಹೊಸದಾಗಿ ಸ್ಥಾಪಿಸಲಾಗಿದ್ದು, ಅದಕ್ಕೆ ಸಹಾಯಕ ಔಷಧ ನಿಯಂತ್ರಕರ ಹುದ್ದೆಯೊಂದನ್ನು ಸಹಾ ಸೃಷ್ಟಿಸಲಾಗಿದೆ. ಕಳಪೆ ಗುಣಮಟ್ಟದ ಹಾಗೂ ನಕಲಿ ಔಷಧ ಮತ್ತು ಪ್ರಸಾಧನಗಳ ಚಲನ ವಲನ (ವ್ಯವಹಾರ)ಗಳ ಬಗ್ಗೆ ಗಮನವಿಡುವ ಸಲುವಾಗಿ ಜಾಗೃತ ದಳದಿಂದ ಹಿಡಿಯಲ್ಪಟ್ಟ ಔಷಧಗಳ ತ್ವರಿತ ರವಾನೆಗಾಗಿ ಪ್ರತ್ಯೇಕ ಸಾರಿಗೆ ವ್ಯವಸ್ಥೆ ಒದಗಿಸುವ ಸಲುವಾಗಿ ರೂ. 2.00 ಲಕ್ಷಗಳು ಮಂಜೂರಾಗಿದೆ.

4. ನ್ಯಾಯಾಂಗ ಶಾಖೆಯೊಂದನ್ನು ಸಹಾ ಇಲಾಖೆಯಲ್ಲಿ ಸ್ಥಾಪಿಸಿದ್ದು ಅದಕ್ಕೆ ಕಾನೂನು ಅಧಿಕಾರಿಯ ಹುದ್ದೆಯೊಂದು ಮಂಜೂರಾಗಿದೆ.

5. ಪ್ರಪಂಚದ ಪ್ರಚಲಿತ ಸಮಸ್ಯೆ "ಏಡ್ಸ್" ನ ನಿರ್ಮೂಲನೆಯ ಸಲುವಾಗಿ, ಕೇಂದ್ರ ಕಾರ್ಯಸ್ಥಾನದಲ್ಲಿ ಒಬ್ಬ ಉಪ ಔಷಧ ನಿಯಂತ್ರಕರು ಹಾಗೂ 3 ಜನ ಔಷಧ ಪರಿವೀಕ್ಷಕಾ ಸಿಬ್ಬಂದಿಯೊಂದಿಗೆ ರಕ್ತನಿಧಿಗಳ ವಿಭಾಗವೊಂದನ್ನು ಸೃಷ್ಟಿಸಲಾಗಿದೆ.

6. ಜಿಲ್ಲಾ ಕಛೇರಿಗಳಿಗೆ ಸಿಬ್ಬಂದಿಯನ್ನು ಒದಗಿಸುವುದರೊಂದಿಗೆ ಔಷಧ ನಿಯಂತ್ರಣ ಇಲಾಖೆಯನ್ನು ಬಲಪಡಿಸಲು ರೂ. 3.00 ಲಕ್ಷಗಳು ಮಂಜೂರಾಗಿದೆ.

### 2. ಸರ್ಕಾರಿ ಔಷಧ ವಿಜ್ಞಾನ ಮಹಾ ವಿದ್ಯಾಲಯ, ಬೆಂಗಳೂರು:—

1. ಪ್ರಯೋಗ ಶಾಲೆಗೆ ಅತ್ಯಾಧುನಿಕ ಉಪಕರಣಗಳನ್ನು ಕೊಳ್ಳುವ ಸಲುವಾಗಿ ಹೊಸ ಯೋಜನೆಯಡಿಯಲ್ಲಿ "ಆಧುನೀಕರಣ ಹಾಗೂ ಅಪ್ರಚುರತೆಯನ್ನು ತೊಡೆದು ಹಾಕುವ ಸಲುವಾಗಿರುವ ಅನುದಾನದ"ದ ಮೇರೆಗೆ ಭಾರತ ಸರ್ಕಾರವು 10.00 ಲಕ್ಷ ರೂ.ಗಳನ್ನು ಸರ್ಕಾರಿ ಔಷಧ ಮಹಾ ವಿದ್ಯಾಲಯಕ್ಕೆ ಬಿಡುಗಡೆ ಮಾಡಿದೆ.

2. ಸರ್ಕಾರಿ ಔಷಧ ವಿಜ್ಞಾನ ಮಹಾ ವಿದ್ಯಾಲಯಕ್ಕೆ ಅತ್ಯಾಧುನಿಕ ಉಪಕರಣಗಳನು ಒದಗಿಸುವ ಸಲುವಾಗಿ ಕೇಂದ್ರ ಸರ್ಕಾರದಿಂದ 15.00 ಲಕ್ಷ ರೂ.ಗಳ ಹೆಚ್ಚಿನ ಅನುದಾನ 1991–92ನೇ ಸಾಲಿನಲ್ಲಿ ಮಂಜೂರಾಗಿದೆ.

### 3. ಔಷಧ ಪರೀಕ್ಷಾ ಪ್ರಯೋಗಾಲಯ, ಬೆಂಗಳೂರು:—

ಔಷಧ ಪರೀಕ್ಷಾ ಪ್ರಯೋಗಾಲಯವು ಇತರೆ ಆತ್ಯಾಧುನಿಕ ಪ್ರಯೋಗಶಾಲಾ ಉಪಕರಣಗಳೊಂದಿಗೆ ಹೆಚ್. ಪಿ. ಟಿ. ಎಲ್. ಸಿ. (ಹೈ ಪ್ರೆಷರ್ ಥಿನ್ ಲೇಯರ್ ಕ್ರೊಮೇಟೋಗ್ರಫಿ) ಯಂತಹ ಅತ್ಯಾಧುನಿಕ ದೋಷಮುಕ್ತ ಉಪಕರಣಗಳನ್ನು ಹೊಂದಿದ್ದು, ಅವುಗಳು ಔಷಧಗಳ ವಿಶ್ಲೇಷಣೆ ಸಹಕಾರಿಯಾಗಿದೆ.

ಔಷಧ ಪರೀಕ್ಷಾ ಪ್ರಯೋಗಾಲಯವನ್ನು ವಿಸ್ತರಣೆಗಾಗಿ ಕೆಲವು ಹೆಚ್ಚಿನ ತಾಂತ್ರಿಕ ಹಾಗೂ ತಾಂತ್ರಿಕೇತರ ಹುದ್ದೆಗಳನ್ನು ಸೃಷ್ಟಿಸುವ ಸಲುವಾಗಿ 1992–93ನೇ ಸಾಲಿಗೆ 17.00 ಲಕ್ಷ ರೂ.ಗಳು ಮಂಜೂರಾಗಿದೆ.

### 1993–94ನೇ ಸಾಲಿಗೆ ಪ್ರಸ್ತಾಪಿತ ವಿಸ್ತರಣಾ ಕಾರ್ಯಕ್ರಮಗಳು:—

ತನ್ನ ಮೂರು ಶಾಖೆಗಳ ವಿಸ್ತರಣಾ ಯೋಜನೆಗಳ ಬಗ್ಗೆ ಇಲಾಖೆಯು ಮಹತ್ವಾಕಾಂಕ್ಷೆ ಹಾಗೂ ಧೃಡಚಿತ್ತ ಹೊಂದಿದ್ದು, ಅದರ ಸಂಕ್ಷಿಪ್ತ ವಿವರಗಳು ಈ ಕೆಳಕಂಡಂತಿವೆ.

### 1. ಅಮಲಂಜಾರಿ:—

ಅ) ಜಿಲ್ಲಾ ಕಛೇರಿಗಳಿಗೆ ದೂರವಾಣಿಗಳನ್ನು ಒದಗಿಸುವುದು.

ಆ) ಔಷಧ ಮತ್ತು ಕಾಂತಿವರ್ಧಕ ಅಧಿನಿಯಮ ಮತ್ತು ಇತರ ಸಂಬಂಧಪಟ್ಟ ಅಧಿನಿಯಮಗಳನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸಲು ವಲಯ ಕಛೇರಿಗಳನ್ನು ಸೃಷ್ಟಿಸುವುದು.

### 2. ಸರ್ಕಾರಿ ಔಷಧ ವಿಜ್ಞಾನ ಮಹಾ ವಿದ್ಯಾಲಯ, ಬೆಂಗಳೂರು:—

ಅ) ಹಾಲಿ ಇರುವ ಸರ್ಕಾರಿ ಔಷಧ ವಿಜ್ಞಾನ ಮಹಾ ವಿದ್ಯಾಲಯ ಕಟ್ಟಡದ ಮೂರನೇ ಮಹಡಿಯ ನಿರ್ಮಾಣ ಕಾರ್ಯ ಮತ್ತಷ್ಟು ಪೂರ್ಣಗೊಳಿಸುವುದು.

ಆ) ಕೇಂದ್ರ ಸರ್ಕಾರದ ಸಹಕಾರದೊಂದಿಗೆ ಪಿ. ಹೆಚ್. ಡಿ. ಶಿಕ್ಷಣ ತರಗತಿಗಳನ್ನು ಸರ್ಕಾರಿ ಔಷಧ ವಿಜ್ಞಾನ ಮಹಾ ವಿದ್ಯಾಲಯದಲ್ಲಿ ಪ್ರಾರಂಭಿಸುವುದು.

ಇ) ಸರ್ಕಾರಿ ಔಷಧ ವಿಜ್ಞಾನ ಮಹಾ ವಿದ್ಯಾಲಯದಲ್ಲಿ ವ್ಯಾಸಂಗ ಮಾಡುತ್ತಿರುವ ಮಹಿಳಾ ಮತ್ತು ಪುರುಷ ವಿದ್ಯಾರ್ಥಿಗಳಿಗೋಸ್ಕರ ಪ್ರತ್ಯೇಕ ಪ್ರತ್ಯೇಕ ವಿದ್ಯಾರ್ಥಿ ನಿಲಯದ ಕಟ್ಟಡ ನಿರ್ಮಾಣ.

3. ಪರೀಕ್ಷಾ ಪ್ರಾಧಿಕಾರ ಮಂಡಳಿ:—

ಡಿಪ್ಲೊಮೊ ಮಟ್ಟದ ಪರೀಕ್ಷೆಗಳನ್ನು ನಡೆಸುವ ಸಲುವಾಗಿ ಹಾಗೂ ಭಾರತೀಯ ಫಾರ್ಮಸಿ ಪರಿಷತ್ತಿನ ವಿನಿಮಯದ ಮೇರೆಗೆ ವಿವಿಧ ಫಾರ್ಮಸಿ ಕಾಲೇಜುಗಳ ಸೌಲಭ್ಯಗಳ ಪರಿವೀಕ್ಷಣೆ ಹಾಗೂ ಆ ಕಾಲೇಜುಗಳ ಪ್ರವೇಶದ ಸಕ್ರಮೀಕರಣದ ಸಲುವಾಗಿ ಕರ್ನಾಟಕ ರಾಜ್ಯದ ವಿಧಾನ ಮಂಡಲದ ಅಂದಾಜು ಸಮಿತಿಯ ಶಿಫಾರಸ್ಸುಗಳ ಮೇರೆಗೆ ಫಾರ್ಮಸಿ ಶಿಕ್ಷಣದ ಪ್ರತ್ಯೇಕ ನಿರ್ದೇಶನಾಲಯ ಸ್ಥಾಪಿಸಿ, ಅದಕ್ಕಾಗಿ ಪ್ರತ್ಯೇಕ ಸಿಬ್ಬಂದಿ ವರ್ಗವನ್ನು ಸೃಷ್ಟಿಸಲು ಪ್ರಸ್ತಾವನೆ ನೀಡಲಾಗಿದೆ.

4. ಔಷಧ ಪರೀಕ್ಷಾ ಪ್ರಯೋಗಾಲಯಂ:—

ನಿಖರವಾದ, ಸೂಕ್ಷ್ಮ ಹಾಗೂ ಶೀಘ್ರವಾಗಿ ಪರೀಕ್ಷಿಸಲು ಯೋಗ್ಯವಾದ ಗ್ಯಾಸ್ ಕ್ರೊಮೋಟೊಗ್ರಫಿ, ಅಟಾಮಿಕ್ ಅಬ್ಸಾರಪ್ಷನ್, ಸ್ಪೆಕ್ಟ್ರೋಫೋಟೋ ಮೀಟರ್ ಮುಂತಾದ ಉಪಕರಣಗಳಿಂದ ಪ್ರಯೋಗಶಾಲೆಯನ್ನು ಸಜ್ಜುಗೊಳಿಸಬೇಕಾಗಿದೆ.

## ಜನಸಂಖ್ಯಾ ಕೇಂದ್ರ, ಬೆಂಗಳೂರು, 1992-93ನೇ ವರ್ಷದ ವಾರ್ಷಿಕ ವರದಿ

## 1992ರ ಡಿಸೆಂಬರ್ 31ನೇ ತಾರೀಖಿನಂತೆ

### 1. ಪರಿಚಯ

ಜನಸಂಖ್ಯಾ ಕೇಂದ್ರದ ಮುಖ್ಯ ಧ್ಯೇಯವು ಕರ್ನಾಟಕ ಸರ್ಕಾರಕ್ಕೆ ಸಹಕರಿಸಿ, ಅದರಲ್ಲೂ ಆರೋಗ್ಯ ಮತ್ತು ಕುಟುಂಬ ಯೋಜನಾ ಸೇವಾ ಕಾರ್ಯಾಲಯವು ಅನುಷ್ಠಾನಗೊಳಿಸುವಂತೆ ಆರೋಗ್ಯ ಮತ್ತು ಕುಟುಂಬ ಯೋಜನಾ ಕಾರ್ಯಕ್ರಮಗಳು ಪರಿಣಾಮಕಾರಿಯಾಗಿಯೂ ಮತ್ತು ಕೌಶಲತೆಯಿಂದಲೂ ಆಗುವಂತೆ ನೆರವಾಗುವುದು ಮತ್ತು ತತ್ಸಂಬಂಧವಾದ ಸಂಶೋಧನಾ ಹಾಗೂ ಮೌಲ್ಯ ಮಾಪನ ಅಧ್ಯಯನಗಳನ್ನು ಕೈಗೊಂಡು, ನಾನಾ ರೀತಿಯ ಸಿಬ್ಬಂದಿ ವರ್ಗದವರಿಗೂ ಮತ್ತು ಅಧಿಕಾರಿಗಳಿಗೂ ಸೇವಾ ನಿರತ ತರಬೇತಿ ಕಾರ್ಯಕ್ರಮಗಳನ್ನು ವ್ಯವಸ್ಥೆಗೊಳಿಸುವುದಾಗಿದೆ.

### 2. ಆಡಳಿತ

ಈ ವರದಿಯ ಕಾಲಾವಧಿಯಲ್ಲಿ ಡಾ॥ ಪಿ. ಹೆಚ್. ರೆಡ್ಡಿಯವರು ನಿರ್ದೇಶಕರಾಗಿರುವರು. ಆ ಅವಧಿಯಲ್ಲಿ ಯಾವುದೇ ಹೆಚ್ಚುವರಿ ಹುದ್ದೆಗಳು ಮಂಜೂರಾಗಿರುವುದಿಲ್ಲ. ಆ ಅವಧಿಯಲ್ಲಿ, ಬೆಂಗಳೂರಿನ ರಾಜ್ಯ ಲೆಕ್ಕಪತ್ರ ಇಲಾಖೆಯಿಂದ ನಿಯೋಜಿಸಲ್ಪಟ್ಟಿದ್ದ ಆಡಳಿತ ಮತ್ತು ಲೆಕ್ಕಾಧಿಕಾರಿಯವರು ತಮ್ಮ ಕಾರ್ಯದಿಂದ ಜನಸಂಖ್ಯಾ ಕೇಂದ್ರದಿಂದ ಬಿಡುಗಡೆಯಾದರು. ಆರೋಗ್ಯ ಮತ್ತು ಕುಟುಂಬ ಯೋಜನಾ ಸೇವಾ ನಿರ್ದೇಶನಾಲಯದಿಂದ ಜನಸಂಖ್ಯಾ ಕೇಂದ್ರಕ್ಕೆ ನಿಯೋಜಿಸಲ್ಪಟ್ಟಿದ್ದ ಒಬ್ಬ ಸಂಶೋಧನಾ ಸಹಾಯಕರು ವರ್ಗವಾಗಿ ಆ ಹುದ್ದೆಯು ಪುನಃ ಆರೋಗ್ಯ ಮತ್ತು ಕುಟುಂಬ ಯೋಜನಾ ಸೇವಾ ನಿರ್ದೇಶನಾಲಯದಿಂದ ವರ್ಗಾವಣೆಯಿಂದ ಭರ್ತಿ ಮಾಡಲ್ಪಟ್ಟಿತು. ಸದರಿ ವರ್ಷದಲ್ಲಿ, ಆರ್ಥಿಕ ಮತ್ತು ಅಂಕಿ ಅಂಶಗಳ ನಿರ್ದೇಶನಾಲಯದಿಂದ ಜನಸಂಖ್ಯಾ ಕೇಂದ್ರದ ಕಛೇರಿಗೆ ನಿಯೋಜಿಸಲ್ಪಟ್ಟಿದ್ದ ಅಂಕಿಅಂಶಗಳ ಸಹಾಯಕರ ವರ್ಗಾವಣೆಯಾಗಿ ಆ ಹುದ್ದೆಯು ಅದೇ ಇಲಾಖೆಯಿಂದ ವರ್ಗಾವಣೆಯಿಂದ ಭರ್ತಿ ಮಾಡಲ್ಪಟ್ಟಿತು.

ಸದರಿ ವರದಿಯ ಅವಧಿಯಲ್ಲಿ, ಪಾಪ್ಯುಲೇಶನ್ ಕೌನ್ಸಿಲ್ ; ನ್ಯೂಯಾರ್ಕ್‌ನವರು ಬೆಂಗಳೂರಿನ ಹೋಟೆಲ್ ವೆಸ್ಟ್ ಎಂಡ್‌ನಲ್ಲಿ ವ್ಯವಸ್ಥೆ ಮಾಡಿದ್ದ "ಕುಟುಂಬ ಯೋಜನೆಯಲ್ಲಿ ಕಾರ್ಯಗತ ಸಂಶೋಧನೆಗಳು" ಎಂಬ ಹತ್ತು ದಿನಗಳ ತರಬೇತಿ ಕಾರ್ಯಾಗಾರದಲ್ಲಿ ಒಬ್ಬ ಸಹಾಯಕ ಸಂಶೋಧನಾಧಿಕಾರಿಗಳು ಭಾಗವಹಿಸಿದ್ದರು. ಬೆಂಗಳೂರಿನಲ್ಲಿರುವ ಕರ್ನಾಟಕ ಸರ್ಕಾರದ ಕಂಪ್ಯೂಟರ್ ಕೇಂದ್ರದಲ್ಲಿ 'ಪಿ ಸಿ. ಸೌಲಭ್ಯಗಳ' 15 ದಿನಗಳ ಅವಧಿಯ ತರಬೇತಿ ಕಾರ್ಯಕ್ರಮದಲ್ಲಿ ಜನಸಂಖ್ಯಾ ಕೇಂದ್ರದ ಒಬ್ಬ ಸಂಶೋಧನಾ ಸಹಾಯಕರು ಮತ್ತು ಒಬ್ಬ ಬೆರಳಚ್ಚುಗಾರರು ಭಾಗವಹಿಸಿದ್ದರು.

31-12-1992 (ಯೋಜನೇತರ)ರಲ್ಲಿದ್ದಂತೆ ಸಂಸ್ಥೆಯ ಸ್ವರೂಪ ಮತ್ತು ಸಿಬ್ಬಂದಿ ಸ್ಥಾನಗಳು

| ಕ್ರಮ ಸಂಖ್ಯೆ | ಅಧಿಕಾರಕ್ಕೆ ಅಂಕಿತವಾದುದು | ಒಟ್ಟು ಮಂಜೂರಾದ ಹುದ್ದೆಗಳು | ಒಟ್ಟು ಭರ್ತಿಯಾದ ಹುದ್ದೆಗಳು | ಗಂಡು | ಹೆಣ್ಣು | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ನಿರ್ದೇಶಕರು | 1 | 1 | 1 | ... | ... | ... |
| 2 | ಸಹಾಯಕ ನಿರ್ದೇಶಕರು | 4 | 2 | 2 | ... | ... | ... |
| 3 | ಸಂಶೋಧನಾಧಿಕಾರಿಗಳು | 7 | 3 | 2 | 1 | .. | ... |
| 4 | ಪೋಷಣಾಧಿಕಾರಿ | 1 | 1 | 1 | ... | ... | ... |
| 5 | ಕಂಪ್ಯೂಟರ್ ಪ್ರೋಗ್ರಾಮರ್ | 1 | ... | ... | ... | ... | ... |
| 6 | ಆಡಳಿತಾಧಿಕಾರಿ ಮತ್ತು ಲೆಕ್ಕಾಧಿಕಾರಿ | 1 | ... | ... | ... | ... | ... |
| 7 | ಸಹಾಯಕ ಸಂಶೋಧನಾಧಿಕಾರಿ | 3 | 2 | 1 | 1 | 1 | .. |
| 8 | ಸಂಶೋಧನಾ ಸಹಾಯಕರು | 18 | 13 | 8 | 5 | 2 | 1 |
| 9 | ಸಂಶೋಧನಾ ಕ್ಷೇತ್ರ ತನಿಖಾಕರ್ತರು | 4 | ... | ... | ... | ... | ... |
| 10 | ಅಂಕಿಅಂಶಗಳ ಸಹಾಯಕರು | 4 | ... | ... | ... | ... | ... |
| 11 | ಗ್ರಂಥಪಾಲಕರು | 1 | 1 | 1 | ... | ... | ... |
| 12 | ಲೆಕ್ಕಪರಿಶೋಧಕರು | 1 | 1 | ... | 1 | ... | ... |
| 13 | ಮೇಲ್ವಿಚಾರಕರು | 1 | ... | ... | ... | ... | ... |
| 14 | ಪ್ರಥಮ ದರ್ಜೆಯ ಸಹಾಯಕರು | 2 | 2 | 2 | ... | ... | ... |
| 15 | ಲೆಕ್ಕ ಸಹಾಯಕರು | 1 | 1 | ... | 1 | ... | ... |
| 16 | ಶೀಘ್ರಲಿಪಿಗಾರರು | 2 | 2 | 1 | 1 | ... | ... |
| 17 | ಬೆರಳಚ್ಚುಗಾರರು | 5 | 5 | 3 | 2 | ... | ... |
| 18 | ದ್ವಿತೀಯ ದರ್ಜೆ ಸಹಾಯಕರು | 1 | 1 | 1 | ... | ... | ... |
| 19 | ಚಾಲಕರು | 4 | 4 | 4 | ... | 1 | ... |
| 20 | 'ಡಿ' ವರ್ಗದವರು | 7 | 6 | 6 | ... | 1 | 1 |
| | ಒಟ್ಟು | 69 | 45 | 33 | 12 | 5 | 2 |

## 31-12-1992 ರಲ್ಲಿದ್ದಂತೆ ಸಿಬ್ಬಂದಿ ಸ್ಥಾನ

| ಹುದ್ದೆಗಳ ವರ್ಗ | ವರ್ಷಾಂತ್ಯದಲ್ಲಿ ಮಂಜೂರಾದ ಹುದ್ದೆಗಳು | ಭರ್ತಿಯಾಗಿರುವ ಹುದ್ದೆಗಳ ಸಂಖ್ಯೆ | | | |
|---|---|---|---|---|---|
| | | ಗಂಡಸರು | ಹೆಂಗಸರು | ಪರಿಶಿಷ್ಟ ಜಾತಿ | ಪರಿಶಿಷ್ಟ ಬುಡಕಟ್ಟು |
| ಎ | 15 | 6 | 1 | — | — |
| ಬಿ | 3 | 1 | 1 | 1 | — |
| ಸಿ | 44 | 20 | 10 | 3 | 1 |
| ಡಿ | 7 | 6 | — | 1 | 1 |
| ಒಟ್ಟು | 69 | 33 | 12 | 5 | 2 |

3. ಆರ್ಥಿಕ ವಿವರಗಳು

### 1992-93ರ ಆಯವ್ಯಯದ ಮಂಡನೆ ಮತ್ತು ವೆಚ್ಚ

ಲೆಕ್ಕದ ಶೀರ್ಷಿಕೆ—ಯೋಜನೆ .—"2211 ಕುಟುಂಬ ಯೋಜನೆ

108 ಐ.ಪಿ.ಪಿ.ಯೂ ಸೇರಿದಂತೆ ಆಯ್ಕೆಯಾದ ಕ್ಷೇತ್ರದ ಕಾರ್ಯಕ್ರಮಗಳು

02 ಭಾರತ ಜನಸಂಖ್ಯಾ ಯೋಜನೆ—3",

ಯೋಜನೇತರ .—"2211 ಕುಟುಂಬ ಯೋಜನೆ

108 ಐ.ಪಿ.ಪಿ.ಯೂ ಸೇರಿದಂತೆ ಆಯ್ಕೆಯಾದ ಕ್ಷೇತ್ರದ ಕಾರ್ಯಕ್ರಮಗಳು

02 ಭಾರತ ಜನಸಂಖ್ಯಾ ಯೋಜನೆ—3".

| ಕ್ರಮ ಸಂಖ್ಯೆ | ಬಾಬ್ತುಗಳು | ಆಯವ್ಯಯ ಹಂಚಿಕೆ 1992-93 | ವೆಚ್ಚ 31-12-92 ರ ವರೆಗೆ |
|---|---|---|---|
| | | ಯೋಜನೆ ರೂ. 9,96,500 | ರೂ. 6,61,369 |
| | | ಯೋಜನೇತರ ರೂ. | ರೂ. |
| 1. | ಸಂಬಳಗಳು | 13,60,000 | 10,22,845 |
| 2. | ತುಟ್ಟಿಭತ್ಯೆ | 5,00,000 | 6,31,770 |
| 3. | ಇತರ ಭತ್ಯೆಗಳು | 1,50,000 | 2,03,455 |
| 4. | ಪ್ರವಾಸ ವೆಚ್ಚಗಳು | 60,000 | 16,240 |
| 5. | ಕಚೇರಿ ವೆಚ್ಚ | 1,80,000 | 1,39,500 |
| 6. | ವೈದ್ಯಕೀಯ ವೆಚ್ಚ | 50,000 | 21,252 |
| 7. | ಮೋಟಾರು ವಾಹನಗಳ ವೆಚ್ಚ | 60,000 | 39,868 |
| | ಒಟ್ಟು (ಯೋಜನೇತರ) ... | 23,69,000 | 20,94,930 |

## 4. ಪೂರ್ಣಗೊಂಡ ಅಧ್ಯಯನಗಳು

### (ಅ) ಫಲವತ್ತತೆ, ಮರಣ ಮತ್ತು ಕುಟುಂಬ ಯೋಜನಾ ಅನುಷ್ಠಾನ : ಕರ್ನಾಟಕದ ಐ.ಪಿ.ಪಿ.—3 ಒಂದು ತುಲನೆ.

ಕರ್ನಾಟಕದ 3ನೆಯ ಜನಸಂಖ್ಯಾ ಯೋಜನೆಯ ಅಂತ್ಯರೇಖಾ ಸಮೀಕ್ಷೆಯು ಎಲ್ಲಾ ಆರು ಯೋಜನಾ ಜಿಲ್ಲೆಗಳಾದ ಬೆಳಗಾಂ, ಬಿಜಾಪುರ, ಧಾರವಾಡ, ಬೀದರ್, ಗುಲ್ಬರ್ಗಾ ಮತ್ತು ರಾಯಚೂರುಗಳಲ್ಲಿ ನೆರವೇರಿತು. ಯೋಜನೆಯು ವತಿಯಿಂದ ನೀಡಲಾದ ಹೆಚ್ಚುವರಿ ಕೊಡುಗೆಗಳ ಪರಿಣಾಮವನ್ನು ಅಂದಾಜಿಸಲು ಈ ಸಮೀಕ್ಷೆಯಲ್ಲಿ ಉದ್ದೇಶಿಸಲಾಗಿದೆ. ಪರಿಣಾಮಕಾರಿಯೆಂದು ಪರಿಗಣಿಸಲಾಗುವ ಅಂಶಗಳಾವುವೆಂದರೆ ; (ಅ) ಫಲವತ್ತತೆ (ಆ) ಮರಣ, (ಇ) ಗರ್ಭ ನಿರೋಧಕಗಳ ಬಳಕೆಯು ಚಾಲ್ತಿಯಲ್ಲಿರುವಿಕೆ ಮತ್ತು (ಈ) ಫಲಾನುಭವಿಗಳ ಲಕ್ಷಣಗಳೂ ಒಳಗೊಂಡಂತೆ ತಾಯಿಮಕ್ಕಳ ಆರೋಗ್ಯ ಮತ್ತು ಕುಟುಂಬ ಯೋಜನಾ ಸೇವೆಗಳ ಬಳಕೆ. ಅಂತ್ಯರೇಖಾ ಸಮೀಕ್ಷೆ ಮತ್ತು ಆಧಾರರೇಖಾ ಸಮೀಕ್ಷೆಗಳ ಫಲಿತಾಂಶಗಳನ್ನು ಹೋಲಿಸುವುದರ ಮೂಲಕ ಪರಿಣಾಮಗಳನ್ನು ನಿರ್ಧರಿಸಲಾಗುವುದು.

ಪ್ರತಿಯೊಂದು ಯೋಜನಾ ಜಿಲ್ಲೆಯಲ್ಲೂ ಜಿಲ್ಲೆಯ ಜನಸಂಖ್ಯೆಯ ಪ್ರಮಾಣ ಎಷ್ಟೇ ಇದ್ದರೂ ಸಹ ತಲಾ 2000 ಕುಟುಂಬಗಳನ್ನು ಮಾದರಿಯಾಗಿ ಅಂತ್ಯರೇಖಾ ಸಮೀಕ್ಷೆಯಲ್ಲಿ ಆಯ್ಕೆಮಾಡಲಾಗಿದೆ. 1991 ರ ಡಿಸೆಂಬರ್ 23ನೇ ತಾರೀಖಿನಿಂದ ಆರಂಭವಾದ ಕ್ಷೇತ್ರ ಸಮೀಕ್ಷೆಯು 1992 ಮಾರ್ಚ್ 31 ರ ವರೆವಿಗೂ ಕೈಗೊಳ್ಳಲಾಯಿತು.

ಯೋಜನಾ ಜಿಲ್ಲೆಗಳಲ್ಲಿ ಆಧಾರರೇಖಾ ಸಮೀಕ್ಷೆಯ ಅವಧಿಯಿಂದ ಅಂತ್ಯರೇಖಾ ಸಮೀಕ್ಷೆಯ ವರೆಗೆ ಶಿಶುಮರಣ ಪ್ರಮಾಣ, (ಶಿ.ಮ.ಪ್ರ.), ಮಕ್ಕಳ ಮರಣದ ಪ್ರಮಾಣ (ಮ.ಮ.ಪ್ರ.) ಮತ್ತು ಕಚ್ಚಾ ಮರಣದ ಪ್ರಮಾಣವು (ಕ.ಮ.ಪ್ರ.) ಇಳಿಮುಖವಾಗಿ ಕಂಡು ಬಂದಿದೆ.

ಎಲ್ಲಾ ಆರು ಯೋಜನಾ ಜಿಲ್ಲೆಗಳಲ್ಲೂ ಕಚ್ಚಾ ಜನನ ಪ್ರಮಾಣ, ಸಾಮಾನ್ಯ ಫಲವತ್ತತೆಯ ಪ್ರಮಾಣ ಮತ್ತು ಸಾಮಾನ್ಯ ಮರಣ ಪ್ರಮಾಣವು ಅಂತ್ಯರೇಖಾ ಸಮೀಕ್ಷೆ ಹಾಗೂ ಆಧಾರ ರೇಖಾ ಸಮೀಕ್ಷೆಗಳ ನಡುವೆ ಇಳಿಮುಖವಾಗಿ ಕಂಡುಬಂದಿದೆ.

ಅಂತ್ಯರೇಖಾ ಸಮೀಕ್ಷೆಯ ಅವಧಿಯಲ್ಲಿ ಪ್ರತಿ 1000 ಜೀವಂತ ಜನನಗಳಿಗೆ ಉಂಟಾದ ಗರ್ಭಪಾತದ ಪ್ರಮಾಣವು ಗಮನಾರ್ಹವಾಗಿ ಇಳಿಮುಖವಾಗಿರುವುದು ಕಂಡುಬಂದಿದೆ ಮತ್ತು ಈ ಇಳಿಮುಖದ ಮಟ್ಟವು ಸದ್ಯ ವಿವಾಹವಾಗಿರುವ ಮಹಿಳೆಯರ ವಯೋಮಟ್ಟವು ಹೆಚ್ಚಿದಂತೆಲ್ಲಾ ಗಣನೀಯವಾಗಿ ಇಳಿಮುಖವಾಗಿದೆ. ಎಲ್ಲಾ ಜಿಲ್ಲೆಗಳ ಸರ್ಕಾರೀ ಆರೋಗ್ಯ ಸಂಸ್ಥೆಗಳಲ್ಲಿ ಲಭಿಸುವ 6 ವಿಧವಾದ ಸೇವೆಗಳ ಬಗ್ಗೆ ಅರಿವುಳ್ಳ ಕುಟುಂಬದ ಹಿರಿಯರ ಪ್ರಮಾಣದಲ್ಲಿ ಗಮನಾರ್ಹವಾದ ಏರಿಕೆಯು ಕಂಡು ಬಂದಿದೆ. ಸರ್ಕಾರಿ ಆರೋಗ್ಯ ಸಂಸ್ಥೆಗಳ ಸೇವೆಯನ್ನು ಉಪಯೋಗಿಸದೇ ಇದ್ದ ಕುಟುಂಬದ ಹಿರಿಯರ ಪ್ರಮಾಣವು ಇಳಿಮುಖವಾಗಿದ್ದು, ಸೇವಾ ಸೌಲಭ್ಯಗಳನ್ನು ಉಪಯೋಗಿಸುವ ಕುಟುಂಬದ ಹಿರಿಯರ ಪ್ರಮಾಣವು ಅಧಿಕವಾಗಿದೆ.

ಆಧಾರರೇಖಾ ಸಮೀಕ್ಷೆಯಿಂದ ಅಂತ್ಯರೇಖಾ ಸಮೀಕ್ಷೆಯವರೆವಿಗೂ ನೊಂದಾಯಿಸಲಾದ ಗರ್ಭಿಣಿಯರ ಪ್ರಮಾಣದಲ್ಲಿ ಸುಮಾರು ಗಣನೀಯವಾಗಿ ಹೆಚ್ಚಿದೆ. ಟಿಟೇನಸ್ ಟಾಕ್ಸಾಯ್ಡ್ ಮತ್ತು ಕಬ್ಬಿಣ ಮತ್ತು ಫೋಲಿಕ್ ಆಮ್ಲದ ಮಾತ್ರೆಗಳನ್ನು ಪಡೆದ ಗರ್ಭಿಣಿಯರ ಪ್ರಮಾಣವು ಮತ್ತು ಇವುಗಳನ್ನು ಸಂಪೂರ್ಣ ಪ್ರಮಾಣದಲ್ಲಿ ಪಡೆದ ಗರ್ಭಿಣಿಯರ ಪ್ರಮಾಣವು ಹೆಚ್ಚಿದೆ. ಯೋಜನಾ ಪ್ರದೇಶದ ಎರಡು ವಿಭಾಗಗಳಲ್ಲೂ, ಆರೋಗ್ಯ ಸಂಸ್ಥೆಗಳಲ್ಲಿನ ಜನನಗಳ ಪ್ರಮಾಣವು ಹೆಚ್ಚಿ, ಮನೆಯಲ್ಲಿ ಉಂಟಾಗುವ ಜನನಗಳ ಪ್ರಮಾಣವು ತಗ್ಗಿದೆ. ಪ್ರಸವೋತ್ತರದ ಮಹಿಳೆಯರನ್ನು ನೊಂದಾಯಿಸುವಲ್ಲಿ ಪ್ರತಿ ಜಿಲ್ಲೆಯೂ ಅಧಿಕವಾಗಿ ನೊಂದಾಯಿಸಿದೆ.

ಒಟ್ಟಿನಲ್ಲಿ ಹೇಳುವುದಾದರೆ. ಆಧಾರರೇಖಾ ಸಮೀಕ್ಷೆ ಮತ್ತು ಅಂತ್ಯರೇಖಾ ಸಮೀಕ್ಷೆಯ ನಡುವಿನಲ್ಲಿ ಯಾವುದಾದರೂ ಒಂದು ಕುಟುಂಬಯೋಜನಾ ವಿಧಾನವನ್ನು ಅನುಸರಿಸುವ ದಂಪತಿಗಳ ಪ್ರಮಾಣದ ಹೆಚ್ಚಳವು ಬಹುಮಟ್ಟಿಗೆ ಕರ್ನಾಟಕದ ಐ.ಪಿ.ಪಿ. 3ನೇ ಯೋಜನೆಯ ಕೊಡುಗೆಗಳ ಪರಿಣಾಮದಿಂದಾಗಿ ಎಂದೆದು ಹೇಳಬಹುದು.

ಈ ಅಧ್ಯಯನವನ್ನಾಧರಿಸಿದ ವರದಿಯೊಂದು ತಯಾರಾಗಿ, ಸರ್ಕಾರಕ್ಕೆ ಸಲ್ಲಿಸಲ್ಪಟ್ಟಿದೆ.

ಔ) ಜನನದ ಕ್ರಮ ಮತ್ತು ಜನನದ ವೇಳೆಯಲ್ಲಿ ಲಿಂಗಪ್ರಮಾಣ–ಬೆಂಗಳೂರಿನಲ್ಲಿ ಆಸ್ಪತ್ರೆಯಲ್ಲಿನ ಜನನಗಳ ಬಗ್ಗೆ ಒಂದು ವಿಶ್ಲೇಷಣೆ.

1989–90ರಲ್ಲಿ ಬೆಂಗಳೂರಿನ ಕೆ.ಸಿ. ಜನರಲ್ ಆಸ್ಪತ್ರೆಯಲ್ಲಾದ ಜನನಗಳ ಮಾಹಿತಿಯನ್ನಾಧರಿಸಿ ಈ ಅಧ್ಯಯನವು ಕೈಗೊಳ್ಳಲಾಗಿದೆ. ಈ ಅಧ್ಯಯನವು ಹೊರಗೆಡಹಿದುದೇನೆಂದರೆ ಜನನದ ವೇಳೆಯಲ್ಲಿ ಮತ್ತು ಜನನದ ಕ್ರಮದ ನಡುವಿನ ಲಿಂಗ ಪ್ರಮಾಣದ ಸಂಬಂಧಿಸಿರುವಿಕೆಯು ನಕ್ಷೆಯರೀತ್ಯಾ ಇಂಗ್ಲಿಷ್ ವರ್ಣಮಾಲೆಯ ವಿ (V) ಆಕಾರದ ಸ್ವರೂಪವನ್ನು ಹೊಂದಿದೆ ಎಂಬುದಾಗಿ. ಲಿಂಗ ಪ್ರಮಾಣವು ಮೂರನೆಯ ಜನನ ಕ್ರಮದಲ್ಲಿ ಬಹಳ ಕನಿಷ್ಠವಾಗಿ ತೋರುವುದು. ಇತರ ಪದಗಳಲ್ಲಿ ಹೇಳುವುದಾದರೆ, ಮೊದಲ ಜನನ ಕ್ರಮದಲ್ಲಿ ಅಧಿಕವಾಗಿ ಕಂಡುಬರುವ ಗಂಡು ಶಿಶುವಿನ ಜನನದ ಸಾಧ್ಯತೆಯು ಜನನ ಕ್ರಮವು 3ನೆಯ ಜನನದವರೆಗೂ ಹೆಚ್ಚುತ್ತಿದ್ದಂತೆಯೇ ಕಡಿಮೆಯಾಗುತ್ತಾ ಹೋಗಿ ಅಲ್ಲಿಂದ ಮುಂದೆ ಮತ್ತೆ ಹೆಚ್ಚಾಗುವುದು.

ಮೊದಲ ಕ್ರಮದ ಜನನಗಳ ಅಧಿಕ ಲಿಂಗ ಪ್ರಮಾಣವು ನವವಿವಾಹಿತರ ಹಾಗೂ ಚಿಕ್ಕ ವಯಸ್ಸಿನ ದಂಪತಿಗಳಲ್ಲಿ ಸಂಭವಿಸಬಹುದಾದ ಅಧಿಕ ಲೈಂಗಿಕ ಆವೃತ್ತಿಗಳ ರೂಪದಲ್ಲಿ ವಿವರಿಸಲಾಗಿದೆ. 'ವಿ' ಆಕಾರದ ಸಂಬಂಧವಿರುವಿಕೆಯನ್ನು ವಿವರಿಸುವ ಒಂದು ಪ್ರಯತ್ನವನ್ನೂ ಮಾಡಲಾಗಿದೆ.

ಕ) ಕುಟುಂಬ ಯೋಜನೆಯನ್ನು ಅಂಗೀಕರಿಸುವಲ್ಲಿ ಮಾನಸಿಕ ಹಾಗೂ ಸಾಮಾಜಿಕ ಅಂಶಗಳು : ಸಾಹಿತ್ಯದ ಪುನರ್ವಿಮರ್ಶೆ.

1971 ರಿಂದ 1990 ರವರೆವಿಗೆ ಕುಟುಂಬ ಯೋಜನೆಯನ್ನು ಅಂಗೀಕರಿಸುವಲ್ಲಿನ ಮಾನಸಿಕ ಹಾಗೂ ಸಾಮಾಜಿಕ ಅಂಶಗಳ ಕುರಿತಾಗಿ ಲಭ್ಯವಾದಂತಹ ಸಾಹಿತ್ಯವನ್ನು ಪುನರ್ವಿಮರ್ಶಿಸಲು ಒಂದು ಪ್ರಯತ್ನವನ್ನು ಮಾಡಲಾಗಿದೆ. ಆದರಿಂದ ಕಂಡು ಬಂದಿದ್ದೇನೆಂದರೆ, ವಿಚಾರ ಮನೋಭಾವ ಮತ್ತು ಆಚಾರದ (ವಿ.ಮ.ಆ.) ಅಧ್ಯಯನಗಳು ವಿಚಾರ, ಮನೋಭಾವ ಮತ್ತು ಆಚಾರಗಳ ನಡುವಿನ ಅಂತರ ತೆರವುಗಳನ್ನು ಹೊರಗೆಡಹಿದ್ದಾಗ್ಯೂ. ಅವುಗಳು ಈ ಅಂತರಗಳಿಗೆ ಕಾರಣೀಭೂತವಾದ ಅಭಿಪ್ರಾಯಗಳು ರೂಪುಗೊಳ್ಳುವಲ್ಲಿನ ''ಶೀವ್ರತೆ'' ಯನ್ನು ತೋರಿಸಿಲ್ಲ. ಬೇರೆ ಪದಗಳಲ್ಲಿ ಹೇಳಬೇಕೆಂದರೆ, ಕುಟುಂಬ ಯೋಜನೆಯನ್ನು ಅನುಷ್ಠಾನಗೊಳಿಸುವಲ್ಲಿ ಪದಗಳಲ್ಲಿ ವ್ಯಕ್ತಪಡಿಸಿದ ಆಸೆಯು ಮತ್ತು ಹಾಗೆ ವ್ಯಕ್ತಪಡಿಸಿದ ಆಸೆಯನ್ನು ಪೂರೈಸಿಕೊಳ್ಳುವಲ್ಲಿನ ಕಾರ್ಯಾಚರಣೆಗಳ ನಡುವಿನ ಅಂತರವನ್ನು ವಿವರಿಸಲು ಈ ಅಧ್ಯಯನಗಳು ಅಶಕ್ಯವಾಗಿವೆ.

ಡ) ರಾಷ್ಟ್ರೀಯ ಶಿಶು ಉಳಿವು ಮತ್ತು ಸುರಕ್ಷಿತ ತಾಯ್ತನದ ಕಾರ್ಯಕ್ರಮ ; ಆರೋಗ್ಯ ಕಾರ್ಯಕರ್ತರಿಗಾಗಿ ಕೈಪಿಡಿ. (ಕನ್ನಡಾನುವಾದ)

1992ರಲ್ಲಿ ಭಾರತ ಸರ್ಕಾರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣದ ಸಚಿವಾಲಯದಿಂದ ಪ್ರಕಟಿಸಲಾದ ರಾಷ್ಟ್ರೀಯ ಶಿಶು ಉಳಿವು ಮತ್ತು ಸುರಕ್ಷಿತ ತಾಯ್ತನದ ಕಾರ್ಯಕ್ರಮದ ಬಗ್ಗೆ ಆರೋಗ್ಯ ಕಾರ್ಯಕರ್ತರ ಕೈಪಿಡಿಯು ಕನ್ನಡದಲ್ಲಿ ಅನುವಾದಗೊಂಡು ಕರ್ನಾಟಕ ಸರ್ಕಾರ ಆರೋಗ್ಯ ಮತ್ತು ಕುಟುಂಬ ಯೋಜನಾ ಕಾರ್ಯಕ್ರಮದ ನಿರ್ದೇಶನಾಲಯದ ಸಹಯೋಗದಿಂದ 1992 ರಲ್ಲಿ ಪ್ರಕಟವಾಯಿತು.

ಆಯ್ಕೆಯಾದ ತಾಯಂದಿರು ಮತ್ತು ಮಕ್ಕಳ ಆರೈಕೆಯಲ್ಲಿನ ಕಾರ್ಯಾಚರಣೆಗಳೊಂದಿಗೆ ರೋಗ ನಿರೋಧಕ ಕಾರ್ಯಕ್ರಮವನ್ನೂ ಹೊಂದಿಕೊಂಡು ಒಂದು ಕಂತಿನಲ್ಲಿ ಸೇವೆಗಳನ್ನು ಅರ್ಪಿಸಲು ಅನುವಾಗುವಂತೆ ಈ ಕೈಪಿಡಿಯನ್ನು ಉದ್ದೇಶಿಸಿ ರಚಿಸಲಾಗಿದೆ. ಈ ಕಂತಿನ ಸೇವೆಯನ್ನು ಇಡೀ ದೇಶಾದ್ಯಂತವೂ ಅನುಷ್ಠಾನಗೊಳಿಸಲಾಗಿದೆ. ಇಡೀ ಕರ್ನಾಟಕದಲ್ಲಿ ತಮ್ಮ ಮಾತೃಭಾಷೆಯಲ್ಲಿಯೇ ಆರೋಗ್ಯ ಕಾರ್ಯಕರ್ತರು ತರಬೇತಿಯನ್ನು ಹೊಂದಲು ಈ ಕೈಪಿಡಿಯನ್ನು ಉಪಯೋಗಿಸಲಾಗಿದೆ.

## 5. 1992ರ ಡಿಸೆಂಬರ್ ಅಂತ್ಯದ ವೇಳೆಗೆ ಮುಂದುವರೆದಿರುವ ಅಧ್ಯಯನಗಳು.

### ಅ) ಭಾರತದಲ್ಲಿ ಜನಸಂಖ್ಯಾ ನೀತಿ ಮತ್ತು ಕುಟುಂಬ ಯೋಜನೆ.

ಜನಸಂಖ್ಯಾ ನೀತಿ ಮತ್ತು ಕುಟುಂಬ ಯೋಜನೆಯ ಬಗ್ಗೆ ಜನಸಂಖ್ಯಾ ಕೇಂದ್ರದವರು ಹಲವಾರು ಅಧ್ಯಯನಗಳನ್ನು ಕೈಗೊಂಡಿರುವರು.

ಹಲವಾರು ಪ್ರಮುಖ ಅಧ್ಯಯನಗಳನ್ನೊಳಗೊಂಡಂತೆ ಸಂಪಾದಿತವಾದ ಗ್ರಂಥವೊಂದನ್ನು ನಿರ್ದೇಶಕರು ತಯಾರು ಮಾಡುತ್ತಿದ್ದಾರೆ. ಈ ಗ್ರಂಥವು ಹದಿನಾಲ್ಕು ಅಧ್ಯಾಯಗಳನ್ನೊಳಗೊಂಡಿದ್ದು ಆ ಅಧ್ಯಾಯಗಳಲ್ಲಿ ಭಾರತದಲ್ಲಿ ಜನಸಂಖ್ಯಾ ನೀತಿಯ ಉಗಮ, ಕುಟುಂಬ ಯೋಜನಾ ಕಾರ್ಯಾಚರಣೆಗೆ ಬಾಧಕವಾದ ಅಂಗಗಳು, ಮನವೊಲಿಸುವಿಕೆಯ ವಿಧಾನಗಳು, ಕುಟುಂಬ ಯೋಜನೆಯಲ್ಲಿ ಉತ್ತೇಜಕಗಳು ಮತ್ತು ನಿರುತ್ತೇಜಕಗಳು ಮತ್ತು ಶಿಶು ಉಳಿವು ಮತ್ತು ಕುಟುಂಬ ಯೋಜನೆ ಮುಂತಾದ ವಿಷಯಗಳನ್ನೊಳಗೊಂಡಿದೆ,

### ಬಿ) ಕೊಡಗು ಜಿಲ್ಲೆಯಲ್ಲಿ ಜನಸಂಖ್ಯಾ ಬೆಳವಣಿಗೆಯ ಬಗ್ಗೆ ಒಂದು ಅಧ್ಯಯನ

1981-91ರಲ್ಲಿ ಕರ್ನಾಟಕ ರಾಜ್ಯದ ಕೊಡಗು ಜಿಲ್ಲೆಯಲ್ಲಿ ಕಡಿಮೆ ಜನಸಂಖ್ಯಾ ಬೆಳವಣಿಗೆಯ ಪ್ರಮಾಣವು (5.05 ಶೇ.) ದಾಖಲೆಯಾಗಿ, ಲಿಂಗ ಪ್ರಮಾಣದಲ್ಲಿ (1000) ಗಂಡಸರಿಗೆ ಇರಬಹುದಾದ ಹೆಂಗಸರ ಪ್ರಮಾಣವು) 1981ರಲ್ಲಿ 933ರಿಂದ 1991ರಲ್ಲಿ 989ರಷ್ಟು ಪ್ರಗತಿಯನ್ನು ತೋರಿಸಿದೆ. ಈ ಕಡಿಮೆ ಜನಸಂಖ್ಯಾ ಬೆಳವಣಿಗೆ ಪ್ರಮಾಣ ಮತ್ತು ಲಿಂಗ ಪ್ರಮಾಣದ ಪ್ರಗತಿಯ ಬಗ್ಗೆ ಇರಬಹುದಾದ ಕಾರಣಗಳನ್ನು ಅರ್ಥಮಾಡಿಕೊಳ್ಳುವ ಸಲುವಾಗಿ, ಬೆಂಗಳೂರಿನಲ್ಲಿರುವ ಜನಸಂಖ್ಯಾ ಕೇಂದ್ರವು ಒಂದು ಕುಟುಂಬದ ಸಮೀಕ್ಷೆಯನ್ನು ಕೊಡಗು ಜಿಲ್ಲೆಯಲ್ಲಿ ಕೈಗೊಂಡಿತು. ಈ ಸಮೀಕ್ಷೆಯು ವಲಸೆ ಹೋಗುವಿಕೆಯ ಪ್ರಮಾಣವನ್ನು ಅಂದಾಜಿಸಿ, ಫಲವತ್ತತೆ ಮತ್ತು ಮರಣದ ಬಗ್ಗೆ ಇರುವ ಮಟ್ಟವನ್ನರಿಯಲು ಮತ್ತು ಕುಟುಂಬ ಯೋಜನಾ ವಿಧಾನಗಳಿಂದ ಸಂರಕ್ಷಿಸಲ್ಪಟ್ಟ ದಂಪತಿಗಳ ಪ್ರಮಾಣವನ್ನು ಅಂದಾಜಿಸಲು ರೂಪಿಸಲಾಗಿದೆ. ಜಿಲ್ಲೆಯಲ್ಲಿನ ನಗರ, ಗ್ರಾಮಾಂತರ ಹಾಗೂ ಪ್ಲಾಂಟೇಶನ್ ಪ್ರದೇಶದಲ್ಲಿರುವ ಸುಮಾರು 3000 ಕುಟುಂಬಗಳನ್ನು ಮಾದರಿಗಾಗಿ ಆಯ್ಕೆ ಮಾಡಲಾಗಿದೆ.

ತತ್ಸಂಬಂಧವಾದ ಕ್ಷೇತ್ರಾಧ್ಯಯನವು ಪೂರ್ಣಗೊಂಡು ಮಾಹಿತಿಯ ತಃಖ್ತೆಯು ನಡೆಯುತ್ತಿದೆ.

### ಕ) ಕರ್ನಾಟಕದಲ್ಲಿರುವ ಐ.ಪಿ.ಪಿ. 3ನೇ ಯೋಜನೆಯಲ್ಲಿ ಮುಂದುವರೆದ ಶಿಕ್ಷಣದ ಬಗೆಗೆ ತರಬೇತಿ ಕಾರ್ಯಕ್ರಮದ ಮೌಲ್ಯಮಾಪನದ ಒಂದು ಅಧ್ಯಯನ

ವೃತ್ತಿಪರವಾದ ಜ್ಞಾನ ಮತ್ತು ಕುಶಲತೆಗಳ ನಡುವೆ ಕಂಡುಬಂದಂತಹ ಅಂತರಗಳನ್ನು ತುಂಬಲು ಮತ್ತು ಇವನ್ನು ಆರೋಗ್ಯ ಕಾರ್ಯಕರ್ತರುಗಳಲ್ಲಿ ದೃಢೀಕರಿಸಲು ಬಲಪಡಿಸಲು ಐ.ಪಿ.ಪಿ.-3ನೇ ಯೋಜನೆಯಲ್ಲಿ ಆಯ್ಕೆಯಾದ 6 ಜಿಲ್ಲೆಗಳಲ್ಲಿ ಮುಂದುವರಿದ ಶಿಕ್ಷಣದ ಬಗ್ಗೆ ಒಂದು ತರಬೇತಿ ಕಾರ್ಯಕ್ರಮಗಳನ್ನು ನಿರ್ವಹಿಸಲಾಯಿತು. ಸಮುದಾಯ ಆರೋಗ್ಯ ಕೇಂದ್ರಗಳಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿನ ಮೇಲ್ವಿಚಾರಕರಾದ ಸಿಬ್ಬಂದಿ ವರ್ಗಕ್ಕೆ ತರಬೇತಿಯನ್ನು ನೀಡುವ ಸಲುವಾಗಿ ಯೋಜನಾ ಕ್ಷೇತ್ರದಲ್ಲಿನ ಗುಲ್ಬರ್ಗ ಹಾಗೂ ಹುಬ್ಬಳ್ಳಿಯಲ್ಲಿರುವ ಆರೋಗ್ಯ ಮತ್ತು ಕುಟುಂಬ ಯೋಜನಾ ತರಬೇತಿ ಕೇಂದ್ರಗಳಿಂದ ಪ್ರತಿ ಕೇಂದ್ರದಿಂದಲೂ ಹತ್ತು ಜನ ಪ್ರಮುಖ ತರಬೇತಿಗಾರರನ್ನು (ಪಠ್ಯ ನಿಪುಣರು) ನಿಯಮಿಸಲಾಯಿತು. ಈ ಎರಡು ಮುಖ್ಯವಾದ ಆರೋಗ್ಯ ಮತ್ತು ಕುಟುಂಬ ಯೋಜನಾ ತರಬೇತಿ ಕೇಂದ್ರಗಳೂ ಸಹ ನಾನಾ ವಿಧವಾದ ಉಪಕರಣಗಳ ಕೊಡುಗೆಗಳಿಂದಾಗಿ ಅಂದರೆ, ಕ್ಯಾಮರಾ, ಶ್ರವಣ-ದೃಕ್ ಗ್ರಂಥಾಲಯ, ಫೋಟೋ ಪ್ರತಿ ಚಿತ್ರಿಸುವ ಯಂತ್ರ ಮೊದಲಾದವುಗಳಿಂದ ತರಬೇತಿಗೆ ಸಂಬಂಧಿಸಿದ ಪರಿಕರ ಸಾಮಗ್ರಿಗಳನ್ನು ಸಜ್ಜುಗೊಳಿಸಲು ಬಲಪಡಿಸಲಾಗಿದೆ. ಪಠ್ಯ ನಿಪುಣರು ಪ್ರಾಥಮಿಕ ಆರೋಗ್ಯ ಕೇಂದ್ರಗಳ ಹಿರಿಯ ಸಿಬ್ಬಂದಿ ವರ್ಗಕ್ಕೆ ಒಂದು ದಿನದ ತರಬೇತಿಯನ್ನು ನೀಡಿದರು. ಅನಂತರ ಹಾಗೆ ತರಬೇತಿ ಪಡೆದ ಪ್ರಾಥಮಿಕ ಆರೋಗ್ಯ ಕೇಂದ್ರಗಳ ಹಿರಿಯ ಸಿಬ್ಬಂದಿ ವರ್ಗದವರು ತಮ್ಮ ತಮ್ಮ ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ನಡೆಯುವ ತಿಂಗಳ ಸಭೆಯಲ್ಲಿ ಮಹಿಳಾ ಮತ್ತು ಪುರುಷ ಕಿರಿಯ ಆರೋಗ್ಯ ಸಹಾಯಕರುಗಳಿಗೆ ಒಂದು ದಿನದ ತರಬೇತಿಯನ್ನು ನೀಡಿದರು. ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ತರಬೇತಿ ಪಡೆದು ಹತ್ತು ಕೆಲಸದ ದಿನ

ಗಳಾದ ನಂತರ, ಆ ಕಿರಿಯ ಆರೋಗ್ಯ ಸಹಾಯಕರು ಸ್ಥಳೀಯ ಪ್ರಾಥಮಿಕ ಘಟಕಗಳಲ್ಲಿ ಸಮಾವೇಶಗೊಂಡು ತಾವು ಕ್ಷೇತ್ರಾಧಾರಿತ ಕಲಿಕೆ ಮತ್ತು ಕುಶಲತೆಗಳಲ್ಲಿನ ಅಂತರಗಳನ್ನು ಪರ್ಯಾಲೋಚಿಸಿ ಮತ್ತು ಸಂಬಂಧಪಟ್ಟ ಪಠ್ಯ ವಿಷಯಗಳ ಬಗ್ಗೆ ಮುಂದುವರಿದ ಮರು ತರಬೇತಿಯ ಬಗ್ಗೆ ಕಾರ್ಯೋನ್ಮುಖರಾದರು.

ಹುಬ್ಬಳ್ಳಿ ಮತ್ತು ಗುಲ್ಬರ್ಗಗಳಲ್ಲಿರುವ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ತರಬೇತಿ ಕೇಂದ್ರಗಳು ಯೋಜನಾ ಕಾರ್ಯಕ್ರಮದ ಪ್ರಕಾರ ನಾನಾರೀತಿಯ ಕೊಡುಗೆಗಳಿಂದ ಬಲಪಡಿಸಲಾಗಿರುವಿಕೆಯ ಬಗ್ಗೆ ಪರಿಶೀಲನೆಮಾಡಿ ಮತ್ತು ಹಿರಿಯ ಮತ್ತು ಕಿರಿಯ ಆರೋಗ್ಯ ಸಹಾಯಕರುಗಳ ಜ್ಞಾನ ಮತ್ತು ಕಾರ್ಯಕುಶಲತೆಗಳ ನಡುವಿನ ಅಂತರವು ಕಡಿಮೆಯಾಗಿದೆಯೋ ಹೇಗೆ ಎಂಬುದನ್ನರಿಯಲು ಒಂದು ಮೌಲ್ಯಮಾಪನ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಈ ಸಂಬಂಧವಾದ ಮಾಹಿತಿಯು ಸಂಗ್ರಹವಾಗಿ, ಮಾಹಿತಿಯ ತಖ್ತೆಯು ಮುಗಿದಿದೆ. ಕರಡು ವರದಿಯು ತಯಾರಿಕೆಯ ಹಂತದಲ್ಲಿದೆ.

## ಡ) ಶೀಘ್ರ ಬೆಳೆಯುತ್ತಿರುವ ರಾಜಧಾನಿಯ ಪರಿಣಾಮಗಳು ಬೆಂಗಳೂರು ನಗರದ ವಿಶೇಷ ಅಧ್ಯಯನ.

1991ನೇ ಜನಗಣತಿಯ ಪ್ರಕಾರ ಬೆಂಗಳೂರು ಪಟ್ಟಣದ ಜನಸಂಖ್ಯೆಯು 40 ಲಕ್ಷಗಳಿಗಿಂತಲೂ ಅಧಿಕವಾಗಿದೆ. ಈ ಬೆಳವಣಿಗೆಯು 1951ರ (7.8)ಲಕ್ಷಗಳು ಜನಸಂಖ್ಯೆಗಿಂತಲೂ ಐದು ಪಟ್ಟು ಹೆಚ್ಚಿದೆ. 1951ರಿಂದೀಚೆಗೆ ಪಟ್ಟಣದ ವಿಸ್ತಾರವೂ ಕೂಡ 68 ಚದರ ಕಿಲೋ ಮೀಟರ್‌ಗಳಿಂದ 365 ಚ.ಕಿ. ಮೀಟರ್‌ಗಳಷ್ಟು ವ್ಯಾಪಕವಾಗಿದೆ. ಈ ಪ್ರದೇಶ ವಿಸ್ತಾರವು ಪ್ರದೇಶದ ಜನಸಂಖ್ಯೆಯ ತ್ವರಿತ ಬೆಳವಣಿಗೆಯಿಂದ ಕೂಡಿ ಪ್ರಸ್ತುತ ಸಮಸ್ಯೆಗಳನ್ನು ಮತ್ತಷ್ಟು ಜಟಿಲಗೊಳಿಸಿದೆ. ಬೆಂಗಳೂರು ನಗರವು ಮುಂಬಯಿ ಮತ್ತು ಕಲ್ಕತ್ತಾ ನಗರಗಳ ಪರಿಸ್ಥಿತಿಯತ್ತ ಧಾವಿಸುತ್ತಿದೆಯೆಂಬುದಾಗಿ ರಾಜನೀತಿಜ್ಞರಲ್ಲಿ ಒಂದು ಶಂಕೆಯನ್ನುಂಟುಮಾಡಿದೆ.

ಈ ಅಧ್ಯಯನವನ್ನು ಬೆಂಗಳೂರು ನಗರದ ಬೆಳವಣಿಗೆಗೆ ಸಂಬಂಧಿಸಿದ ನಾನಾ ರೀತಿಯ ಅಂಶಗಳನ್ನು ಅರ್ಥಮಾಡಿಕೊಳ್ಳಲು ಉದ್ದೇಶಿಸಿ ರಚಿಸಲಾಗಿದೆ. ನಗರದ ಬೆಳವಣಿಗೆಯ ಸ್ವರೂಪ, ಜನಾಂಗ ಸ್ಥಿತಿಗಳ ವಿವರ, ರೋಗವ್ಯಾಪನೆ ಮತ್ತು ವಲಸೆ ಹೋಗುವಿಕೆ ಮತ್ತು ಸಾರ್ವಜನಿಕ ಸೌಲಭ್ಯಗಳ ಪೂರೈಕೆ ಮುಂತಾದ ವಿಚಾರಗಳನ್ನರಿಯಲು ಅಧ್ಯಯನದಲ್ಲಿ ಪ್ರಯತ್ನವನ್ನು ಮಾಡಲಾಗಿದೆ. ಈ ಅಧ್ಯಯನವು ದ್ವಿತೀಯ ಬಗೆಯ (ಲಭ್ಯವಾಗುವ) ಮಾಹಿತಿಯನ್ನಾಧರಿಸಿರುವುದು. ಇದರ ಬಗ್ಗೆ ಒಂದು ಕರಡು ವರದಿಯು ರೂಪುಗೊಳ್ಳುತ್ತಿದೆ.

## ಈ) ಲೆಪರೋಸ್ಕೋಪಿಕ್ ಟ್ಯುಬೆಕ್ಟಮಿ ಅಥವಾ ಉದರದರ್ಶಕ ಸಂತಾನಹರಣ ಚಿಕಿತ್ಸೆ ಮತ್ತು ವ್ಯಾಸೆಕ್ಟಮಿ (ಗಂಡಸರ ಸಂತಾನಹರಣ ಶಸ್ತ್ರ ಚಿಕಿತ್ಸೆ)ಯನ್ನು ಅಂಗೀಕರಿಸುವಲ್ಲಿ ಇಳಿಮುಖಕ್ಕೆ ಕಾರಣಗಳು.

ಇತ್ತೀಚಿನ ವರ್ಷಗಳಲ್ಲಿ, ವ್ಯಾಸೆಕ್ಟಮಿ ಮತ್ತು ಉದರದರ್ಶಕ ಟ್ಯುಬೆಕ್ಟಮಿಯನ್ನು ಅಂಗೀಕರಿಸುವಲ್ಲಿ ಇಳಿಮುಖ ಕಂಡುಬಂದಿದೆ ಈ ಇಳಿಮುಖಕ್ಕೆ ಕಾರಣಗಳನ್ನು ಕಂಡುಹಿಡಿಯುವ ಸಲುವಾಗಿ, ಈ ಮೇಲ್ಕಂಡ ಅಧ್ಯಯನವನ್ನು ಜನಸಂಖ್ಯಾ ಕೇಂದ್ರವು ಕೈಗೊಂಡಿದೆ. ಕರ್ನಾಟಕ ರಾಜ್ಯದಲ್ಲಿರುವ ನಾಲ್ಕು ರೆವಿನ್ಯೂ ವಿಭಾಗಗಳಿಂದ ಒಂದೊಂದು ಜಿಲ್ಲೆಯನ್ನು ಅಸಮಗಾತ್ರದ ರೀತ್ಯಾ(ರ್‍ಯಾಂಡಮ್) ಆಯ್ಕೆಮಾಡಲಾಗಿದೆ. ಇದೇ ರೀತಿ, ಆಯ್ಕೆಯಾದ ಪ್ರತಿಯೊಂದು ಜಿಲ್ಲೆಯಲ್ಲೂ ಎರಡು ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಮತ್ತು ಆಯ್ಕೆಯಾದ ಪ್ರತಿಯೊಂದು ಪ್ರಾಥಮಿಕ ಕೇಂದ್ರದಿಂದಲೂ ನಾಲ್ಕು ಉಪ–ಕೇಂದ್ರಗಳನ್ನು ಆಯ್ಕೆಮಾಡಲಾಗಿದೆ. ಪ್ರತಿಯೊಂದು ಆಯ್ಕೆಮಾಡಲಾದ ಉಪ–ಕೇಂದ್ರದಿಂದಲೂ, 25 ಸಂತಾನಹರಣ ಶಸ್ತ್ರಕ್ರಿಯೆ ಪಡೆದವರನ್ನು ಅಸಮಗಾತ್ರದ ರೀತ್ಯ ಅಧ್ಯಯನಕ್ಕಾಗಿ ಆಯ್ಕೆಮಾಡಲಾಗಿದೆ. ನಗರ ಪ್ರದೇಶದ ಮಾದರಿಗಳನ್ನು (ಆಯ್ಕೆಯಾದ ಪ್ರತಿ ಜಿಲ್ಲೆಯಲ್ಲಿನ 100 ಸಂತಾನಹರಣ ಶಸ್ತ್ರಚಿಕಿತ್ಸೆ ಪಡೆದವರು) ಆಯ್ಕೆಯಾದ ಜಿಲ್ಲೆಯಲ್ಲಿರುವ ಜಿಲ್ಲಾ ಮುಖ್ಯ ಕೇಂದ್ರಗಳಲ್ಲಿ ವ್ಯಾಪಕವಾಗಿರುವ ನಗರ ಕುಟುಂಬ ಕಲ್ಯಾಣ ಕೇಂದ್ರದ ಪ್ರದೇಶಗಳಿಂದ ಆಯ್ಕೆಮಾಡ

ಲಾಗಿದೆ. ಈ ಮೊದಲೇ ರಚಿಸಿದಂತಹ ಪ್ರಶ್ನಾವಳಿಯ ಸಹಾಯದಿಂದ ಆಯ್ಕೆಯಾದ ಫಲಾನುಭವಿಗಳನ್ನು (ಕು.ರೋ. ಅಂಗೀಕೃತರು) ಸಂದರ್ಶಿಸಿ ಅವರುಗಳಿಂದ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಇದರ ಜೊತೆಯಲ್ಲಿ, ಪ್ರತ್ಯೇಕವಾದ ಪ್ರಶ್ನಾವಳಿಯ ಸಹಾಯದಿಂದ 84 ಜನ ವೈದ್ಯಕೀಯ ಮತ್ತು ಸಮಾನಸ್ಥರಾದ (ಪ್ಯಾರಾ ಮೆಡಿಕಲ್) ಸಿಬ್ಬಂದಿ ವರ್ಗದವರು ಸಂದರ್ಶಿಸಲ್ಪಟ್ಟರು. ಈ ಸಂಬಂಧವಾದ ಮಾಹಿತಿಯು ತಖ್ತೆಯು ಮುಂದುವರಿದಿದೆ.

## ಉ) ರೇಷ್ಮೆ ವ್ಯವಸಾಯ ಮಾಡುವ ಕಾರ್ಯಕರ್ತರುಗಳ ಆರೋಗ್ಯ ಸಮಸ್ಯೆಗಳು ಒಂದು ಅಧ್ಯಯನ.

ಈ ಅಧ್ಯಯನದ ಮೂಲ ಉದ್ದೇಶಗಳು ಈ ರೀತಿ ಇವೆ.

(1) ರೇಷ್ಮೆ ಕೈಗಾರಿಕೆಯಲ್ಲಿ ಕೆಲಸಗಾರರು ಎದುರಿಸಬೇಕಾದ ಆರೋಗ್ಯದ ಸಮಸ್ಯೆಗಳು ಅಂದರೆ ರೇಷ್ಮೆಹುಳುವಿನ ಬೀಜೋತ್ಪತ್ತಿಯ ಕೇಂದ್ರಗಳಲ್ಲಿ ಮತ್ತು ನೂಲು ಸುತ್ತುವ ಘಟಕಗಳಲ್ಲಿ ಕೆಲಸ ಮಾಡುವವರ ಸಮಸ್ಯೆಗಳು ಮತ್ತು (2) ಅಂತಹ ಸಮಸ್ಯೆಗಳನ್ನು ತಗ್ಗಿಸಲು ಕೆಲಸಗಾರರಿಂದ ಕೈಗೊಳ್ಳಲಾದ ಮುಂಜಾಗ್ರತಾ ಮತ್ತು ಸುರಕ್ಷಿತಾ ವಿಧಾನಗಳ ಅಧ್ಯಯನ.

ರೇಷ್ಮೆಹುಳುವನ್ನು ಸಾಕುವವರ ಆರೋಗ್ಯ ಸಮಸ್ಯೆಗಳನ್ನು ಅಧ್ಯಯನ ಮಾಡಲು ರಾಮನಗರದ ಬಳಿ ಇರುವ ಐದು ಹಳ್ಳಿಗಳನ್ನು ಆಯ್ಕೆ ಮಾಡಿ, ಅವುಗಳಲ್ಲಿನ ರೇಷ್ಮೆಹುಳುವನ್ನು ಸಾಕುವ ಕೆಲಸ ಮಾಡುತ್ತಿರುವ ಒಂದುನೂರು ಮಂದಿಯನ್ನು ಅಧ್ಯಯನಕ್ಕೆಂದು ಮಾದರಿಯಾಗಿ ಆಯ್ಕೆಮಾಡಲಾಯಿತು. ನಿಯಂತ್ರಣ ಗುಂಪಿಗಾಗಿ ಅದೇ ಹಳ್ಳಿಗಳಲ್ಲಿ ಬೇರೆ ಬೇರೆ ಕಾರ್ಯಚಟುವಟಿಕೆಗಳಲ್ಲಿ ನಿರತರಾಗಿರುವ ಐವತ್ತು ಮಂದಿಯನ್ನು ಆಯ್ಕೆ ಮಾಡಲಾಯಿತು. ಇದರ ಜೊತೆಗೆ, ಐವತ್ತು ಮಂದಿ ರೇಷ್ಮೆಮೊಟ್ಟೆಯ ಕೇಂದ್ರಗಳಲ್ಲಿ ಕೆಲಸಮಾಡುವವರನ್ನೂ ಮತ್ತು ಎಂಭತ್ತು ಮಂದಿ ರಾಮನಗರದಲ್ಲಿನ ಬೇರೆ ಬೇರೆ ನೂಲುಸುತ್ತುವ ಘಟಕಗಳಿಂದ ಆಯ್ಕೆಮಾಡಲಾಯಿತು. ಈ ಸಂಬಂಧವಾದ ಕ್ಷೇತ್ರ ಕಾರ್ಯವನ್ನು 1992ನೇ ಜೂನ್ ತಿಂಗಳಿನಲ್ಲಿ ಕೈಗೊಂಡು, ಸಂಗ್ರಹವಾದ ಮಾಹಿತಿಯ ವಿಶ್ಲೇಷಣೆಯು ಪೂರ್ಣಗೊಂಡು ವರದಿಯ ಒಂದು ಕರಡು ಪ್ರತಿಯು ತಯಾರಾಗಿದೆ.

ಅಧ್ಯಯನದಲ್ಲಿ ಕಂಡುಬಂದ ಅಂಶವೇನೆಂದರೆ, ಶೇಕಡಾ 14ರಷ್ಟು ರೇಷ್ಮೆಹುಳು ಸಾಕುವ ಕಾರ್ಯಕರ್ತರು, ಶೇ. 28ರಷ್ಟು ಮೊಟ್ಟೆಮಳಿಗೆಯ ಕಾರ್ಯಕರ್ತರು ಮತ್ತು ಶೇ. 32.50 ರಷ್ಟು ರೇಷ್ಮೆನೂಲನ್ನು ಸುತ್ತುವ ಕೆಲಸಗಾರರು, ಶೇ. 12 ಮಂದಿ ನಿಯಂತ್ರಿತ ಗುಂಪಿನವರ ವಿರುದ್ಧ ಆರೋಗ್ಯದ ಸಮಸ್ಯೆಗಳನ್ನೆದುರಿಸುತ್ತಿರುವವರು. ರೇಷ್ಮೆಮೊಟ್ಟೆ ಮಳಿಗೆಯಲ್ಲಿ ಕೆಲಸಮಾಡುವವರಲ್ಲಿ ಶ್ವಾಸಕೋಶಕ್ಕೆ (ಉಸಿರಾಟದ) ಸಂಬಂಧಿಸಿದ ಆರೋಗ್ಯ ಸಮಸ್ಯೆ ಹೊಂದಿದವರು ಪ್ರಮುಖರಾಗಿದ್ದಾರೆ. ಆದರೆ, ರೇಷ್ಮೆನೂಲನ್ನು ಸುತ್ತುವ ಕೆಲಸಗಾರರಲ್ಲಿ ಶ್ವಾಸಕೋಶಕ್ಕೆ ಸಂಬಂಧಿಸಿದ ಮತ್ತು ಚರ್ಮರೋಗ ಸಮಸ್ಯೆಗಳೂ ಕೂಡ ವ್ಯಕ್ತವಾದುವು. ಅವರುಗಳು ಕೈಗೊಂಡಿದ್ದ ಸುರಕ್ಷಾ ಮತ್ತು ಮುಂಜಾಗರೂಕತಾ ಕ್ರಮಗಳು ತೃಪ್ತಿಕರವಾಗಿರಲಿಲ್ಲ.

6. 1993–94ರಲ್ಲಿ ಉದ್ದೇಶಿಸಲಾಗಿರುವ ಕಾರ್ಯಕ್ರಮಗಳು

ಅ) ಕರ್ನಾಟಕದ 3ನೇ ಭಾರತ ಜನಸಂಖ್ಯಾಯೋಜನೆಯ ಪರಿಣಾಮಗಳ ಬಗ್ಗೆ ಒಂದು ರಾಷ್ಟ್ರೀಯ ಸಮ್ಮೇಳನ.

1993ನೇ ಜನವರಿ ತಿಂಗಳಿನಲ್ಲಿ ಬೆಂಗಳೂರಿನಲ್ಲಿ ನಡೆಯಲಿರುವ ಒಂದು ರಾಷ್ಟ್ರೀಯ ಸಮ್ಮೇಳನದಲ್ಲಿ 3ನೇ ಭಾರತ ಜನಸಂಖ್ಯಾ ಯೋಜನೆಯಿಂದ ಫಲವತ್ತತೆ, ಮರಣ ಮತ್ತು ಕುಟುಂಬಯೋಜನಾ ಅನುಷ್ಠಾನ ಇತ್ಯಾದಿಗಳ ಪರಿಣಾಮಗಳನ್ನು ಜನಸಂಖ್ಯಾ ಕೇಂದ್ರವು ಕೈಗೊಂಡ ಆಧಾರರೇಖಾ ಮತ್ತು ಅಂತಿಮರೇಖಾ ಸಮೀಕ್ಷೆಗಳಲ್ಲಿ ಕಂಡುಬಂದಂತೆ ಚರ್ಚಿಸಲಾಗುವುದು.

ಬ) ಪ್ರಸ್ತುತದಲ್ಲಿ ಕೈಗೊಂಡಿರುವ ಅಧ್ಯಯನಗಳ ಪೂರ್ಣಗೊಳಿಕೆ

ಈ ಮೊದಲೇ ಹೇಳಲಾಗಿರುವ ಆರು ಅಧ್ಯಯನಗಳು 1993–94ರಲ್ಲಿ ಸಂಪೂರ್ಣವಾಗಲಿದೆ.

ಕ) ಹೊಸದಾಗಿ ಕೈಗೊಳ್ಳಬೇಕಾಗಿರುವ ಅಧ್ಯಯನಗಳು

1993–94ರಲ್ಲಿ ಉದ್ದೇಶಿಸಲಾಗಿರುವ ಅಧ್ಯಯನಗಳು ಈ ಕೆಳಕಂಡಂತಿದೆ:—

(1) ಪ್ರಾಥಮಿಕ ಆರೋಗ್ಯ ಕೇಂದ್ರದ ಮಟ್ಟದಲ್ಲಿ ಕುಟುಂಬ ಯೋಜನಾ ಕಾರ್ಯಕ್ರಮದ ಗುಣ ಮಟ್ಟದ ಬಗ್ಗೆ ಒಂದು ಅಧ್ಯಯನ.

(2) ಭಾರತ ಜನಸಂಖ್ಯಾ ಯೋಜನೆ–1ರ ಪ್ರದೇಶದ ಪುನರ್ ಸಮೀಕ್ಷೆ

(3) ಮಕ್ಕಳ ಬಗ್ಗೆ ಇರುವ ಮೌಲ್ಯಗಳು.

(4) ಮಕ್ಕಳ ಹುಟ್ಟು ತೂಕದ ಮೇಲೆ ಪ್ರಭಾವ ಬೀರುವಂತಹ ಅಂಶಗಳು

(5) ಮಹಿಳೆಯರ ಗರ್ಭಧಾರಣೆಯ ವಯಸ್ಸು ಮತ್ತು ಅವರ ಮಕ್ಕಳ ಬುದ್ಧಿಮಟ್ಟ.

(6) ಗರ್ಭಪಾತವನ್ನಪೇಕ್ಷಿಸುವಲ್ಲಿ ಸಂಬಂಧಿಸಿದ ಮಾನಸಿಕ ಅಂಶಗಳು.

(7) ಫಲವತ್ತತೆಯ ಮೇಲೆ ವಿವಾಹದ ವಯೋಮಾನದ ಪರಿಣಾಮ.

(8) ಕರ್ನಾಟಕ ಸರ್ಕಾರೀ ನೌಕರರಲ್ಲಿ ಫಲವತ್ತತೆ, ಮರಣ ಮತ್ತು ಕುಟುಂಬ ಯೋಜನಾ ವಿಧಾನಗಳ ಅನುಷ್ಠಾನ.

